


## ಡಾ॥ ವೀರೇಶ್ ಎಸ್. ಬಡಿಗೇರ್


ಕಲಾವಿದರ ಮನೆತನದ ಡಾ॥ ವೀರೇಶ್ ಎಸ್. ಬಡಿಗೇರ್‌ರವರು ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯ, ಹಂಪಿಯಲ್ಲಿ ಪ್ರವಾಚಕರಾಗಿ ಹಸ್ತಪ್ರತಿ ಶಾಸ್ತ್ರ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಇದಕ್ಕೆ ಮೊದಲು ಕೆಲವು ಮಹಾವಿದ್ಯಾಲಯಗಳಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ, ಅನಂತರ ಕನ್ನಡ ವಿಶ್ವವಿದ್ಯಾಲಯವನ್ನು ಸೇರಿದರು. ಅಲ್ಲಿ ತಮ್ಮ ಅನುಭವ, ಜ್ಞಾನ ಪರಿಶ್ರಮದಿಂದ ಸಂಶೋಧನಾ ಸಹಾಯಕರಾಗಿ ಪ್ರಸಾರಾಂಗದಲ್ಲಿ ಸಹಾಯಕ ನಿರ್ದೇಶಕರಾಗಿ, ಹಸ್ತಪ್ರತಿ ವಿಭಾಗದಲ್ಲಿ ಉಪನ್ಯಾಸಕರಾಗಿ ಅನಂತರ ಪ್ರವಾಚಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

೧೯೯೭ರಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿಯ ಸಮಾಜ ವಿಜ್ಞಾನಗಳ ನಿಕಾಯದಿಂದ ಉತ್ತರ ಕರ್ನಾಟಕ ಜಾನಪದ ಗೀತಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ವಿಷಯದ ಮೇಲೆ ಪಿಎಚ್.ಡಿ. ಮಹಾ ಪ್ರಬಂಧವನ್ನು ರಚಿಸಿ ಡಾಕ್ಟರೇಟ್ ಪದವಿ ಪಡೆದಿದ್ದಾರೆ. ಅನೇಕ ಸಂಶೋಧನಾ ಲೇಖನಗಳನ್ನು ಮತ್ತು ಅನೇಕ ಪುಸ್ತಕ, ನಾಟಕಗಳನ್ನು ಬರೆದಿದ್ದಾರೆ. ವಿಮರ್ಶಕರಾಗಿ, ಪಿಎಚ್.ಡಿ. ಮಾರ್ಗದರ್ಶಕರ ಪ್ರಮುಖ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ, ತಮ್ಮ ಪ್ರಬಂಧಗಳನ್ನು ಮಂಡಿಸಿದ್ದಾರೆ. ತಮ್ಮ ಸಾಹಿತ್ಯ ಮತ್ತು ಸಂಶೋಧನೆಗಾಗಿ, ಸಿಂಪಿಲಿಂಗಣ್ಣ ಪ್ರತಿಷ್ಠಾನದ ಶ್ರೇಷ್ಠ ಜಾನಪದ ಕೃತಿ ಪ್ರಶಸ್ತಿ ೧೯೯೯, ಮತ್ತು ಜಾನಪದ ಸಂರಕ್ಷಣಾ ಪರಿಷತ್ತು ಮಂಡಿಗೇರಿ (ಬದಾಮಿ) ಇವರಿಂದ ೧೯೯೯ರಲ್ಲಿ ಶ್ರೇಷ್ಠ ಸಂಶೋಧನ ಪ್ರಶಸ್ತಿ ಪಡೆದಿದ್ದಾರೆ. ಜಾನಪದ ಹಸ್ತಪ್ರತಿ ಮತ್ತು ಸಂಶೋಧನಾ ಕ್ಷೇತ್ರದಲ್ಲಿ ಅವಿರತವಾಗಿ ಶ್ರಮಿಸುತ್ತಿದ್ದಾರೆ.

ಶಿಲ್ಪಕಲಾವಿದರ ಮಾಲೆ : ೯

# ಧನಂಜಯ ಶಿಲ್ಪಿ

ಡಾ॥ ವೀರೇಶ್ ಎಸ್. ಬಡಿಗೇರ್




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೇಲ್ಮನೆ, ಕನ್ನಡಭವನ
ಜೆ.ಸಿ. ರಸ್ತೆ, ಬೆಂಗಳೂರು – 560 002

**DHANJAYA SHILPI**
*A Biography By*
**Dr. Veeresh S. Badiger**

*Published by*
N. Marishamachar
Registrar
Karnataka Shilpakala Academy
Ist Floor, Kannada Bhavana
J.C. Road, Bangalore - 560 002

ಮೊದಲ ಮುದ್ರಣ : 2004

ಪ್ರತಿಗಳು : 1000

ಬೆಲೆ ರೂ. 15-00

ಮುದ್ರಕರು
**ಫ್ರೆಂಡ್ಸ್ ಕಾಮ್‌ಟೆಕ್**
5 ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018
✆ 2652 8454

# ಮೊದಲ ಮಾತು

ನಮ್ಮ ರಾಜ್ಯ ಶಿಲ್ಪಕಲೆಗೆ ವಿಶ್ವದಲ್ಲೇ ಹೆಸರು ಪಡೆದಿದ್ದು 'ಶಿಲ್ಪಕಲೆಯ ತವರೂರು' ಎಂದು ಕರೆಯಲ್ಪಟ್ಟಿದೆ. ಈ ನಾಡಿನಲ್ಲಿ ಅನೇಕ ಶಿಲ್ಪ ಶೈಲಿಗಳು ಹುಟ್ಟಿ ಅವು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆ. ನಮ್ಮ ರಾಜ್ಯದಲ್ಲಿ ಶಿಲ್ಪಕಲೆಗಾಗಿ ದುಡಿದವರು ಹಲವಾರು ಶಿಲ್ಪಿಗಳು. ಕೆಲವು ಶಿಲ್ಪಿಗಳು 'ಶಿಲ್ಪ' ರಚಿಸುವುದೇ ತಮ್ಮ ಕಾಯಕವೆಂದು ತಿಳಿದು, ಶಿಲ್ಪದ ಮೇಲೆ ತಮ್ಮ ಹೆಸರುಗಳನ್ನು ನಮೂದಿಸಿರುವುದಿಲ್ಲ. ಸಾಂಪ್ರದಾಯಿಕವಾಗಿ ಶಿಲ್ಪಕಲೆ ಬೆಳೆದು ಬಂದಿದ್ದು, ಇಂದಿಗೂ ಈ ಕಲೆಗಳನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವವರು ನಮ್ಮಲ್ಲಿದ್ದಾರೆ. ಶಿಲ್ಪಕಲಾ ಅಕಾಡೆಮಿ ಇಂತಹ ಹಿರಿಯ ಶಿಲ್ಪಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಪ್ರಾರಂಭಿಸಿದೆ. ಈ ಪುಸ್ತಕಗಳು ಈ ಶಿಲ್ಪಿಗಳ ಮತ್ತು ಕೃತಿಗಳ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಶಿಲ್ಪಕಲೆ ಬೆಳೆದು ಬಂದ ದಾರಿ ಮತ್ತು ಅದರ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುವುದು.

ಈ ಯೋಜನೆಯಲ್ಲಿ ನಮ್ಮ ನಾಡಿನ ಹೆಸರಾಂತ ಶಿಲ್ಪಿಗಳಾದ ಧನಂಜಯ ಶಿಲ್ಪಿ ಅವರ ಬಗ್ಗೆ ಡಾ।। ವೀರೇಶ್ ಬಡಿಗೇರ್ ಅವರು ಬರೆದಿದ್ದಾರೆ. ಅವರಿಗೆ ಅಕಾಡೆಮಿ ಪರವಾಗಿ ವಂದನೆಗಳನ್ನು ಸಲ್ಲಿಸುವೆ.

ಶ್ರೀ ಧನಂಜಯ ಶಿಲ್ಪಿ ಅವರು ವಾಸ್ತವಿಕ ಮತ್ತು ಸಮಕಾಲೀನ ಶಿಲ್ಪಕಲೆಯಲ್ಲಿ ನಿಷ್ಣಾತರು. ಇಂತಹ ಹಿರಿಯ ಶಿಲ್ಪಿಯ ಬಗ್ಗೆ ನಮ್ಮ ಅಕಾಡೆಮಿ ಈ ಕಿರು ಪುಸ್ತಕವನ್ನು ಪ್ರಕಟಿಸುತ್ತಿದೆ. ನಮ್ಮ ಈ ಪ್ರಯತ್ನವನ್ನು ಕಲಾಭಿಮಾನಿಗಳು ಸ್ವಾಗತಿಸುವರೆಂದು ಆಶಿಸುವೆ.

ಬೆಂಗಳೂರು

ಎನ್.ಜಿ. ನೀಲಕಂಠಾಚಾರ್
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಧನಂಜಯ ಶಿಲ್ಪಿ

ಹದಿನೆಂಟು ಜನ ವಾಸ್ತುಶಿಲ್ಪ ಪುರಾತನಾಚಾರ್ಯರಲ್ಲಿ ವಿಶ್ವಕರ್ಮನದು ಅದ್ವಿತೀಯ ಹೆಸರು. ಶಿಲ್ಪಕ್ಕೆ ಸಂಬಂಧಿಸಿದಂತೆ ಹೊಸ ರೀತಿಯ ವೈಜ್ಞಾನಿಕ ಆವಿಷ್ಕಾರಗಳನ್ನು ಜನಪ್ರಿಯ ಮಾದರಿಗಳನ್ನು ಈತ ಬಳಕೆಗೆ ತಂದ. ಬ್ರಹ್ಮನ ಮಾನಸ ಪುತ್ರನೆಂದು ಶಿಲ್ಪಶಾಸ್ತ್ರ ಗ್ರಂಥಗಳಿಂದ ಕರೆಯಿಸಿಕೊಳ್ಳುವ ವಿಶ್ವಕರ್ಮ ದೇವಶಿಲ್ಪಿಯಾಗಿದ್ದ. ಈತನ ಮಗ ಸ್ಥಪತಿ. ಈತನ ಆಧೀನದಲ್ಲಿ ವರ್ಧಕಿ ಮತ್ತು ತಕ್ಷಕ ಕೆಲಸ ಮಾಡುತ್ತಾರೆ. ಇಂಥ ವಿಶ್ವಕರ್ಮನ ಪರಂಪರೆಯಲ್ಲಿ ಚಿತ್ರ ಮತ್ತು ವಿಶೇಷವಾಗಿ ಶಿಲ್ಪದಲ್ಲಿ ಆಚಾರ್ಯರಾಗಿ ಬೆಳೆದು ಬಂದವರು ಪ್ರತಿಷ್ಠಿತ ಜಕಣಾಚಾರಿ ಪ್ರಶಸ್ತಿ ಪುರಸ್ಕೃತ ಶ್ರೀ ಧನಂಜಯ ಶಿಲ್ಪಿ ಅವರು.

ಪ್ರಾಚೀನ ಶಿಲ್ಪಶಾಸ್ತ್ರಗ್ರಂಥಗಳಲ್ಲಿ ಶಿಲ್ಪವೆಂದರೆ ಕಲಾಕೌಶಲ. ಭವನ, ಉದ್ಯಾನ, ಭೂಪರೀಕ್ಷೆ, ರಥಯಂತ್ರ ರಚನೆ ಶಯನಾಗಾರ ಮುಂತಾದ ನಿರ್ಮಾಣ ಸಾಧ್ಯತೆಗಳೂ ನಿಹಿತಗೊಂಡಿವೆ. ಹೀಗೆ ಯುಗಧರ್ಮದ ಹಿನ್ನೆಲೆಯಲ್ಲಿ ಹಲವಾರು ವ್ಯಾಖ್ಯಾನಗಳಿಗೆ ಶಿಲ್ಪಶಾಸ್ತ್ರವು ಎಡೆ ಮಾಡಿಕೊಡುತ್ತ ಬಂದಿದ್ದು ಚರಿತ್ರೆಯಿಂದ ತಿಳಿದುಬರುತ್ತದೆ. ಆದರೆ ಇಂದು ಶಿಲ್ಪ ಮತ್ತು ಚಿತ್ರಗಳು ಪ್ರತ್ಯೇಕ ಶಿಸ್ತುಗಳಾಗಿ ಬೆಳೆದಿರುವುದನ್ನು ಸ್ಪಷ್ಟವಾಗಿ ಕಾಣುತ್ತೇವೆ. ಇದಕ್ಕೆ ಶಿಲ್ಪಕಲಾ ಅಕಾಡೆಮಿ ಮತ್ತು ಲಲಿತಕಲಾ ಅಕಾಡೆಮಿಗಳು ಎನ್ನುವ ಎರಡು ಶಾಖೆಗಳು ಉತ್ತಮ ನಿದರ್ಶನಗಳು.

ಶಿಲ್ಪ ಮತ್ತು ಚಿತ್ರಗಳು ಪ್ರತ್ಯೇಕ ಶಿಸ್ತುಗಳಾಗಿ ಬೆಳೆದಿದ್ದರೂ ಕಲಾವಿದರಲ್ಲಿ ಈ ಎರಡು ಶಿಸ್ತುಗಳ ಗುಣಲಕ್ಷಣಗಳು ಕಾಣಸಿಗುತ್ತವೆ. ಅಷ್ಟೆ ಅಲ್ಲ ಬಹಳಷ್ಟು ಹಿರಿಯ

ತಲೆಮಾರಿನ ಕಲಾವಿದರು ಈ ಎರಡೂ ಶಿಸ್ತುಗಳಲ್ಲಿ ಕೃಷಿ ಮಾಡಿದ್ದು ಕಂಡುಬರುತ್ತದೆ. ಯಾವುದೇ ಸೃಜನಶೀಲ ಮನಸ್ಸು ಪ್ರತ್ಯೇಕತೆಗಿಂತ ಪ್ರತಿಯೊಂದರ ಸಂಪರ್ಕದಿಂದ ಬೆಳೆಯಲು ಹವಣಿಸುತ್ತದೆ. ಇಂಥ ಬೆಳವಣಿಗೆ ಕಲೆಗೆ ಶುಷ್ಕತೆಯನ್ನು ತಂದುಕೊಡದೆ ಒಂದು ಸಾಂಸ್ಕೃತಿಕ ಜವಾಬ್ದಾರಿಯನ್ನು ತಂದುಕೊಡುತ್ತದೆ. ಧನಂಜಯ ಶಿಲ್ಪಿಯವರ ಮನೆತನ ಇಂಥ ಒಂದು ಸಾಂಸ್ಕೃತಿಕ ಜವಾಬ್ದಾರಿಯನ್ನು ತಲೆಮಾರಿನಿಂದಲೂ ಹೊತ್ತು ತಂದಿರುವುದನ್ನು ಕಾಣುತ್ತೇವೆ.

## ಶಿಲ್ಪಿಯವರ ಪೂರ್ವಾಪರ

ಧನಂಜಯ ಶಿಲ್ಪಿಯವರ ಮನೆತನದ ಮೂಲ ಸಾಂಗಲಿ ಜಿಲ್ಲೆಯ ಜತ್ತ ತಾಲ್ಲೂಕಿನ ಜೀರಗ್ಯಾಳ ಗ್ರಾಮ. ಧನಂಜಯ ಶಿಲ್ಪಿಯವರ ತಂದೆಯವರಾದ ಶಿವಬಸಪ್ಪನವರು ಆಧ್ಯಾತ್ಮಿಕ ಮಾರ್ಗಿಗಳಾಗಿದ್ದರು, ಭಜನೆ,ಕೀರ್ತನೆಗಳು ಅವರ ಒಡನಾಡಿಗಳಾಗಿದ್ದವು. ಅಥಣಿಯ ಮಾಣಿಕೆಮ್ಮ ಎಂಬವರನ್ನು ಮದುವೆಯಾಗಿ ಅತ್ತೆ ಮಾವನವರ ಒತ್ತಾಸೆಯಿಂದ ಅಥಣಿಯಲ್ಲಿಯೇ ತಮ್ಮ ತುಂಬು ಜೀವನವನ್ನು ಸವೆಸಿದರು. ಈ ತುಂಬು ಜೀವನದ ಫಲಿತವಾಗಿ ಶಿವಬಸಪ್ಪನವರಿಗೆ ಐದು ಜನ ಮಕ್ಕಳು ಹುಟ್ಟಿದರು. ಇವರಲ್ಲಿ ಮೂರು ಜನ ಗಂಡು ಮಕ್ಕಳು, ಎರಡು ಜನ ಹೆಣ್ಣುಮಕ್ಕಳು. ಇವರಲ್ಲಿ ಮೊದಲನೆಯವರು ತಾರಕ್ಕ, ಎರಡನೆಯವರು ಗಣಪತಿ, ಮೂರನೆಯವರು ಕಮಲಕ್ಕ, ನಾಲ್ಕನೆಯವರು ಪಾಂಡುರಂಗ, ಐದನೆಯವರು ಧನಂಜಯಶಿಲ್ಪಿ.

ಧನಂಜಯ ಶಿಲ್ಪಿಯವರ ತಂದೆ ಶಿವಬಸಪ್ಪನವರು ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ಶಿಕ್ಷಕ ವೃತ್ತಿಯೊಂದಿಗೆ ಚಿತ್ರ, ಶಿಲ್ಪದ ಹವ್ಯಾಸ, ಪುರಾಣ ಕೇಳುವುದು ಮತ್ತು ಹೇಳುವುದನ್ನೂ ರೂಢಿಸಿಕೊಂಡಿದ್ದರು. ಇದೂ ಅಲ್ಲದೆ ಗರಡಿ, ಮಲ್ಲಯುದ್ಧದಂತಹ ಅನೇಕ ಸ್ಥಳೀಯ ಕಲೆಗಳಲ್ಲಿ ಪರಿಣಿತರಾಗಿದ್ದರು. ತಾಯಿ ಮಾಣಿಕ್ಯಮ್ಮನವರು ಹೆಸರಿಗೆ ತಕ್ಕ ಹಾಗೆ ಅನರ್ಘ್ಯರತ್ನವೇ ಆಗಿದ್ದರು. ಸಾಧ್ವಿ ಶಿರೋಮಣಿಯೂ ದಯಾಮಯಿಯೂ ಗೃಹಲಕ್ಷ್ಮಿಯೂ ಆದ ಮಾಣಿಕ್ಯಮ್ಮನವರು ದೈವಭಕ್ತಿ ಮತ್ತು ಮಾನವೀಯ ಅಂತಃಕರಣಗಳಿಗೆ ಹೆಸರಾಗಿದ್ದರು.

ಶಿವಬಸಪ್ಪನವರಿಗೆ ಸಿಗುತ್ತಿದ್ದ ಆರು ರೂಪಾಯಿ ಸಂಬಳದಲ್ಲಿಯೇ ಅತಿಥಿ ಅಭ್ಯಾಗತರನ್ನು ಉಣಿಸಿ ತಣಿಸಿ ತಾವೂ ತೃಪ್ತ ಬದುಕನ್ನು ಕಳೆಯುತ್ತಿದ್ದರು. ಅಲ್ಲದೆ ಶರಣ,



ಲಲಿತಕಲಾ ಅಕಾಡೆಮಿ ಪ್ರಶಸ್ತಿಯನ್ನು ರಾಜ್ಯಪಾಲ ಶ್ರೀ ಬ್ಯಾನರ್ಜಿ
ಅವರಿಂದ ಸ್ವೀಕರಿಸುತ್ತಿರುವುದು

ಸಂತರ ಭಕ್ತಿಸೇವೆ ದಾಸೋಹಗಳೇ ಅವರ ಉಸಿರಾಗಿದ್ದವು. ನಿರಾಳ, ನಿರ್ಭಿಡೆ, ಸರಳ, ಸೌಜನ್ಯ ಮೂರ್ತಿಗಳಾದ ಈರ್ವರೂ ತ್ಯಾಗಶೀಲರಾಗಿದ್ದರು. ಹೀಗಾಗಿ ಶಿವಬಸಪ್ಪನವರನ್ನು ಜನರು ಶಿವಾಶಿವಾ ಎಂದೇ ಗುರುತಿಸುತ್ತಿದ್ದರಂತೆ. ತಂದೆಯವರ ಈ ಬದುಕನ್ನು ಕುರಿತು ಹೇಳುವಾಗ ಧನಂಜಯ ಶಿಲ್ಪಿಯವರಲ್ಲಿ ಅದೇನೋ ಧ್ಯಾನಸ್ಥ ಚೈತನ್ಯ ಎದ್ದುಕಾಣುತ್ತಿತ್ತು.

ಎಲ್ಲ ಸಾಧಕ ಮತ್ತು ಸಿದ್ಧಪುರುಷರ ಹುಟ್ಟಿನ ಹಿಂದೆ ಒಂದು ಅತಿಮಾನುಷ ಶಕ್ತಿ ಇರುವಂತೆ ಧನಂಜಯ ಶಿಲ್ಪಿ ಅವರ ಹಿಂದೆಯೂ ಅಂಥದೊಂದು ಕಥೆ ಪ್ರಚಲಿತವಾಗಿದೆ. ಅಥಣಿಯಲ್ಲಿ ವಾಸವಾಗಿದ್ದ ಶಿವಬಸಪ್ಪ ಮತ್ತು ಮಾಣಿಕ್ಯಮ್ಮರಿಗೆ ಯಾತ್ರಾರ್ಥಿಯಾಗಿ ಬಂದ 'ಗರೀಬದಾಸ' ಎಂಬ ಸಂತನ ಸಾಮಿಪ್ಯ ದೊರೆಯುತ್ತದೆ. ಅಥಣಿಯಲ್ಲಿ ನೆಲೆನಿಂತ ಈತನಿಗೆ ಗುಡಿಸಲು ಕಟ್ಟಿಕೊಡುವ ಜವಾಬ್ದಾರಿಯನ್ನು ಈ ದಂಪತಿಗಳಿಗೆ ಊರಿನವರು ವಹಿಸಿಕೊಡುತ್ತಾರೆ. ತುಂಬ ಗಾಢವಾದ ಭಕ್ತಿ ವಿಶ್ವಾಸಗಳು ಆ ಸಂತ ಮತ್ತು ದಂಪತಿಗಳಿಬ್ಬರ ನಡುವೆ ಬೆಳೆಯುತ್ತವೆ. ಗರೀಬದಾಸನ ಸಾಮಿಪ್ಯ ಈ ಮೊದಲೇ ಶಿವಬಸಪ್ಪನವರಲ್ಲಿದ್ದ ಪಾರಮಾರ್ಥಿಕ ಸಂವೇದನೆಗೆ ಮತ್ತಷ್ಟು ಇಂಬುಗೊಡುತ್ತದೆ. ಗಂಡ ಹೆಂಡರಿಬ್ಬರೂ ಗರೀಬದಾಸರ ಸಾಮಿಪ್ಯ ಒಂದು ವರವಾಗಿ ದೊರಕುತ್ತದೆ. ಶರಣ ಗರೀಬದಾಸರ ಗುಣವಿಶೇಷಣೆ ಎಂದರೆ ಪ್ರತಿದಿನ ಮೂರು ಮನೆಯ ಭಿಕ್ಷೆ ಬೇಡಿ ಹಿಟ್ಟು ತರುವುದು. ತಂದ ಹಿಟ್ಟಲ್ಲಿ ಮೂರು ರೊಟ್ಟಿಯನ್ನು ತಾವೇ ಮಾಡಿ ಒಂದನ್ನು ಆಕಳಿಗೂ ಮತ್ತೊಂದನ್ನು ಚಿಕ್ಕಮಕ್ಕಳಿಗೂ ಕೊಟ್ಟು ಉಳಿದ ಒಂದನ್ನು ತಾವು ತಿನ್ನುತ್ತಿದ್ದರು. ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿಯಾದ ಗರೀಬದಾಸರ ಈ ಸ್ವಾಭಿಮಾನಿ ಮತ್ತು ಸ್ವಾಲಂಬಿ ವ್ಯಕ್ತಿತ್ವ ಶಿವಬಸಪ್ಪನವರನ್ನು ಗಾಢವಾಗಿ ಪ್ರಭಾವಿಸಿತ್ತು. ಇಷ್ಟೊತ್ತಿಗೆ ಕೆಲಸಕ್ಕೆ ರಾಜಿನಾಮೇ ನೀಡಿ ಶಿವಬಸಪ್ಪನವರು ಅಜ್ಜ ರಾಯಪ್ಪನ ಜೊತೆ ಕೂಲಿ ಕೆಲಸ, ಕಟ್ಟಡ ನಿರ್ಮಾಣಗಳಲ್ಲಿ ಭಾಗಿಯಾಗಿ ದಿನ ಬದುಕನ್ನು ನಿರ್ವಹಿಸುತ್ತಿದ್ದರು. ತನ್ನ ಬದುಕಿನ ಕೊನೆಗಳಿಗೆಯಲ್ಲಿ ಈ ಸಂತ ಶಿವಬಸಪ್ಪ ದಂಪತಿಗಳಿಗೆ ಒಂದು ಮಾತು ಹೇಳುತ್ತಾರೆ. 'ಏ......! ಶಿವಬಸಪ್ಪ ನಾನು ಸತ್ತ ಮೇಲೆ ನನ್ನ ಮೂರ್ತಿಯನ್ನು ಕಲ್ಲಿನಲ್ಲಿ ಕೆತ್ತಿಡಬೇಕು.....ನಿಮ್ಮ ವಂಶದಲ್ಲಿ ಏಳು ತಲೆಮಾರಿನವರೆಗೆ ಕಲಾಕೃತಿ ತಯಾರಿಸುವ ಮಹಾನ್ ಕಲಾವಿದರು ಹುಟ್ಟಿ ಬರುತ್ತಾರೆ' ಎಂದು ಹೇಳಿ ಲಿಂಗೈಕ್ಯರಾದರು. ಇದನ್ನು ಕೇಳಿದ ದಂಪತಿಗಳೀರ್ವರಿಗೂ ಪರಮಾಶ್ಚರ್ಯ. ಮೂರ್ತಿಕೆತ್ತಲು ಬರದಿದ್ದರೂ ಗುರುವಿನ ಪ್ರೇರಣೆಯಿಂದಾಗಿ ಶಿವಬಸಪ್ಪನವರು ಬಂಡೆ ಗಲ್ಲನ್ನು ಬಡಿದು ಬಗ್ಗಿಸಿ ಸಂತರ

ಅಭೂತಪೂರ್ವ ಪ್ರತಿಮೆಯೊಂದನ್ನು ರೂಪಿಸಿ ನಿಲ್ಲಿಸಿದರು. ಇದು ಇಂದಿಗೂ ಅಥಣಿಯ ಈ ಸಂತನ ಸಮಾಧಿಯ ಮೇಲೆ ಕಾಣಿಸುತ್ತದೆ. ಇಂಥ ಗುರುಪ್ರೇರಿತ ತಂದೆಯ ಮಗನಾಗಿ ಅಭೂತಪೂರ್ವ ಶಿಲ್ಪಸಾಧಕರಾಗಿ ಧನಂಜಯ ಶಿಲ್ಪಿಯವರು ನಮ್ಮ ಮಧ್ಯ ಬೆಳೆದು ನಿಂತಿದ್ದಾರೆ.

## ಶಿಲ್ಪಿಯವರ ಬಾಲ್ಯ ಮತ್ತು ಬೆಳವಣಿಗೆ

ಮಾಣಿಕ್ಯಮ್ಮ ಮತ್ತು ಶಿವಬಸಪ್ಪನವರ ಮಗನಾಗಿ ಧನಂಜಯ ಅವರು 20ನೇ ಜನವರಿ 1934ರಂದು ಬೆಳಗಾವಿ ಜಿಲ್ಲೆಯ ಅಥಣಿಯಲ್ಲಿ ಜನಿಸಿದರು. ಇವರ ಜನನ ಕೂಡ ತುಂಬಾ ಹೋರಾಟದ್ದಾಗಿತ್ತು. ಸಿದ್ಧಪುರುಷರ ನಾಡಲ್ಲಿ ಹುಟ್ಟಿದ ಈ ಹುಡುಗ ತುಂಬಾ ಸಿಟ್ಟಿನವನೂ ಚಟುವಟಿಕೆಯುಳ್ಳವನೂ ಆಗಿದ್ದನು. ಮೂರುವರ್ಷದ ಹಸುಳೆಯಿರುವಾಗಲೇ ತಂದೆ ಕೆತ್ತುತ್ತಿದ್ದ ಮೂರ್ತಿಗಳನ್ನು ಕಣ್ಣುಮಿಟುಕಿಸದೇ ನೋಡುತ್ತಿದ್ದ ಹುಡುಗ ಆವಾಗಲೇ ತನ್ನ ತನ್ಮಯತೆಯನ್ನು ಶಿಲ್ಪಕ್ಷೇತ್ರದಲ್ಲಿ ಸ್ಥಾಪಿಸಲಾರಂಭಿಸಿದ. ಕೆಸರು ಮುದ್ದೆಯಲ್ಲಿ ಅಂಕುಡೊಂಕಾದ ವಯೋ ಸಹಜವಾದ ಆಕಾರಗಳನ್ನು ರೂಪಿಸಿ ಭವಿಷ್ಯವನ್ನು ಭರವಸೆಯಿಂದ ವಿಸ್ತರಿಸಿಕೊಳ್ಳಲಾರಂಭಿಸಿದ. ಒಂಭತ್ತು ವರ್ಷವಿರುವಾಗಲೇ ಜಲವರ್ಣ ಚಿತ್ರಗಳನ್ನು ರಚಿಸಲಾರಂಭಿಸಿದರು. ಇದನ್ನು ಕಂಡ ತಂದೆ ತಾಯಂದಿರು ಅಪಾರ ಸಂತೋಷ ಮತ್ತು ಅಭಿಮಾನದಿಂದ ಕುಣಿದು ಕುಪ್ಪಳಿಸುತ್ತಿದ್ದರು. ಅದೇನೋ ಧನಂಜಯ ಶಿಲ್ಪಿಯವರಿಗೂ ಸಾವಿಗೂ ಗುಣಾತ್ಮಕ ನಂಟಿದೆ. ಸಾವು ಎಂದರೆ ಹೌಹಾರುವ, ಭೀತಿ ಹುಟ್ಟುವ ಪರಿಸರವನ್ನು ಸಾವನ್ನು ಬದುಕಾಗಿ ಪರಿವರ್ತಿಸಿಕೊಂಡ ಹೆಗ್ಗಳಿಕೆ ಅವರದು. ತಾಯಿಗರ್ಭದಿಂದಲೇ ಹೊರಬರುವಾಗ ತಾಯಿಯ ಸಾವಿಗೆ ಕಾರಣವಾಗುವ ಭಯದ ವಾತಾವರಣ. ಮಗುವನ್ನು ಕತ್ತರಿಸಿ ತೆಗೆಯಬೇಕೆಂಬ ವೈದ್ಯರ ಸಲಹೆಗೆ, ಶಿಲ್ಪಿಯವರ ತಾಯಿ ಸತ್ತರೆ ನಾನು ಸತ್ತೇನು ನನ್ನ ಕೂಸನ್ನು ಕೊಲ್ಲದಿರಿ ಎಂದು ಹೇಳುತ್ತಾಳೆ. ಕೊನೆಗೂ ಹೆರಿಗೆಯಾಗುತ್ತದೆ. ಹೊಟ್ಟೆ ತುಂಬಿದವರು ಕಾಳನ್ನು ಕಂಕಿಯಲ್ಲಿ ನೂಕಿ ನಡೆದರೆ ಹಸಿದವರು ಕಂಕಿಯಲ್ಲಿ ಕಾಳನ್ನೇ ಊದಿ, ತೆಗೆದು ಸ್ವಚ್ಛಗೊಳಿಸಿಗೊಂಡು ಬದುಕಿನ ಗಂಜಿಯನ್ನಾಗಿ ಪರಿವರ್ತಿಸಿಕೊಳ್ಳುತ್ತಾರೆ. ಹಾಗೆ ಧನಂಜಯ ಶಿಲ್ಪಿ ಹಸುಗೂಸಾಗಿ ಭೂಮಿಗೆ ಬಿದ್ದಾಗ ಉಸಿರಿನ ತೊಂದರೆಯಾಗಿ ಅದು ಸತ್ತೆ ಹೋಯಿತು. ತಾಯಿಯಾದರೂ ಬದುಕಿದರಲ್ಲ ಎನ್ನುವ ಹವಣಿಕೆಯಲ್ಲಿರುವಾಗ ಪುಣ್ಯಾತ್ಮಳಾದ

ಒಬ್ಬಳ ಮಮತೆಯಿಂದಾಗಿ ಮಗು ಮರು ಜೀವ ಪಡೆಯುತ್ತದೆ. ಇಲ್ಲಿ ಸಾವು ಪುನರ್‌ಜನ್ಮ ನೀಡುತ್ತದೆ.

ಧನಂಜಯ ಶಿಲ್ಪಿ ಚಿಕ್ಕ ಹುಡುಗನಾಗಿದ್ದಾಗ ಸಾಧು ಒಬ್ಬನ ಮರಣವಾಗುತ್ತದೆ. ಸತ್ತದೇಹದ ಸುತ್ತ ನೆರೆದ ಭಕ್ತಕೋಟಿ ಆಕಾಶವೇ ಕಳಚಿದಂತೆ ಅಳುವುದು ಕರೆಯುವುದು ಮಾಡುತ್ತಿರುತ್ತಾರೆ. ಇನ್ನೂ ಕೆಲವರು ರಾತ್ರಿ ಇಡೀ ಭಜನೆ ಮಾಡುತ್ತಿರುತ್ತಾರೆ. ಲೋಕವೆಲ್ಲ ಸಾವಿನ ದುಃಖದಲ್ಲಿ ಮುಳುಗಿದರೆ ಬಾಲಕ ಧನಂಜಯ ಸಾವಿನ ನೆಲೆಯಲ್ಲೆ ಸಾಧನೆಗಿಳಿಯುತ್ತಾರೆ. ಸತ್ತ ಸಾಧುವನ್ನು ಲೋಕದ ಜನ ಕೊಂಡಾಡಿ ಅಳುತ್ತಿದ್ದರೆ ಧನಂಜಯ ಆ ಹೆಣದ ಕಳೆಬರಹವನ್ನು ತನ್ನ ತರಳಬೆರಳುಗಳ ಮೂಲಕ ಅದ್ಭುತವಾಗಿ ಬಿಡಿಸಿಡುತ್ತಾರೆ. ಅಸ್ತಿತ್ವ ಹೀನವಾಗುತ್ತಿದ್ದ ಸಾಧುವಿನ ಮುಖದರ್ಶನವನ್ನು ಜನರಿಗೆ ದೊರಕಿಸಿಕೊಟ್ಟ ಭಾಗ್ಯ ಪಡೆಯುತ್ತಾರೆ. ಆಧುನಿಕ ಸಲಕರಣೆಗಳಿಲ್ಲದ ಆ ಸಂದರ್ಭದಲ್ಲಿ ಸದರಿ ಚಿತ್ರ ಬಾಲಕನಿಗೆ ಹೆಗ್ಗಳಿಕೆಯನ್ನು ತಂದುಕೊಡುತ್ತದೆ. ಇಲ್ಲಿ ಸಾವು ಅವರ ಭಾವಿ ಭವಿಷ್ಯಕ್ಕೆ ಕಿಟಕಿಯಾಗುತ್ತದೆ. ಬಾಲಕನ ಇಂಥ ಅದ್ಭುತ ಕಲಾಕೃತಿಯನ್ನು ಕಂಡು ನೀಲಯ್ಯ ನೇರೇರಿ ಮಠ ಬಾವು ವೆಂಜರರು ಎನ್ನುವ ಹಿರಿಯರು ಮೆಚ್ಚಿ ಮುಂದೆ ಈ ಹುಡುಗ ದೊಡ್ಡ ಕಲಾವಿದನಾಗಿ ಹೆಸರಾಂತ ಕಲಾವಿದರ ಪಟ್ಟಿಗೆ ಸೇರುತ್ತಾರೆ ಎನ್ನುವ ಭವಿಷ್ಯ ನುಡಿಯುತ್ತಾರೆ. ಅವರ ಹಾರೈಕೆಯಂತೆ ಇಂದು ಮಹಾನ್ ಶಿಲ್ಪಿಗಳಾಗಿ ಶ್ರೀ ಧನಂಜಯ ಅವರು ಬೆಳೆದು ನಿಂತಿದ್ದಾರೆ. ಸಾಮಾನ್ಯವಾಗಿ ಶಿಲ್ಪರೂಪಿಕೆಗೆ ಸೈದ್ಧಾಂತಿಕತೆಗಿಂತ ಪ್ರಾಯೋಗಿಕತೆಯೇ ಬಹುಮುಖ್ಯವಾದದ್ದು. ನೋಟ ಗ್ರಹಿಕೆ ಮತ್ತು ಕ್ರಿಯೆಯುಕ್ತವಾದ ಅನೌಪಚಾರಿಕ ಶಿಕ್ಷಣವನ್ನು ತೀರಾ ಮುಗ್ಧಾವಸ್ಥೆಯಲ್ಲಿಯೇ ಧನಂಜಯ ಶಿಲ್ಪಿಯವರು ತನ್ನದಾಗಿಸಿಕೊಳ್ಳುತ್ತ ಬಂದರು. ಔಪಚಾರಿಕ ಶಿಕ್ಷಣ ಇಂಥ ಕಲೆಗಳ ಕಲಿಕಾ ವಿಷಯದಲ್ಲಿ ತುಂಬಾ ಶುಷ್ಕವಾದ ಅನುಭವವನ್ನೇ ನೀಡುವಂಥದ್ದು. ಬದುಕಿನಾನುಭವದೊಂದಿಗೆ ಅದು ತಳುಕು ಹಾಕಿಕೊಳ್ಳಲಾರದು. ಆದರೆ ಧನಂಜಯ ಶಿಲ್ಪಿಯವರು ಇಂಥ ಜೀವನಾನುಭವ ಮತ್ತು ಶಿಲ್ಪರಚನಾನುಭವಗಳನ್ನು ಮೇಳವಿಸಿಕೊಂಡು ಬೆಳೆದವರು. ಹೀಗಾಗಿಯೇ ಅವರ ಚಿತ್ರ ಮತ್ತು ಶಿಲ್ಪಕೃತಿಗಳಲ್ಲಿ ಬದುಕಿನ ಸಹಜ ಲಯ ವಿನ್ಯಾಸಗಳು ಹೆಣಿಕೆ ರೂಪದಲ್ಲಿ ಎದ್ದು ಕಾಣುತ್ತವೆ.

**ಶಿಕ್ಷಣ**

ಸಾಂಪ್ರದಾಯಿಕವಾದ ಸ್ವಯಂಪ್ರೇರಿತ ಕಲಿಕೆ ನಡೆಯುತ್ತಿರುವಾಗಲೇ

ಧನಂಜಯಶಿಲ್ಪಿಯವರನ್ನು ಅವರ ಅಭಿರುಚಿಗೆ ವಿಮುಖವಾದ ಶಾಲಾ ಶಿಕ್ಷಣಕ್ಕೆ ಕಳಿಸಲಾಯಿತು. ಜನಿಸಿದ ಅಥಣಿ ಊರಲ್ಲಿಯೇ ಪ್ರಾಥಮಿಕ ಶಾಲಾಭ್ಯಾಸಕ್ಕೆ ಹೋಗಹತ್ತಿದರು. ಇದು ಧನಂಜಯ ಅವರ ಸಹಜ ಕಲಿಕೆ ಮತ್ತು ಅಭಿರುಚಿಗೆ ತುಂಬಾ ತೊಡಕಾಯಿತು. ಹಾಗೂ ಹೀಗೂ ಮಾಡಿ ಪ್ರಾಥಮಿಕ ಶಿಕ್ಷಣ ಮುಗಿಸಿದರು. ಎಷ್ಟಾದರೂ ಶಾಲಾಭ್ಯಾಸಕ್ಕಿಂತ ಮೂರ್ತಿಗಳ ವಿನ್ಯಾಸ, ರೂಪ, ರಚನೆ, ವಿಧಿ ವಿಧಾನಗಳ ಕಡೆಗೆ ಹೆಚ್ಚು ಗಮನಹರಿಸುತ್ತಿದ್ದರು. ಕೆಸರಿನಲ್ಲಿ ತನಗನಿಸಿದ ಮೂರ್ತಿರೂಪಗಳನ್ನು ವಿನ್ಯಾಸಗೊಳಿಸಿ ಖುಷಿ ಪಡುತ್ತಿದ್ದರು. ಚಿತ್ರ ಬಿಡಿಸುವುದರಲ್ಲೂ ಅದೇ ತಾದಾತ್ಮ್ಯತೆಯನ್ನು ಕಾಪಾಡಿಕೊಳ್ಳುತ್ತಿದ್ದರು. ತನ್ನ ಮನಕೊಪ್ಪುವ ರಚನಾ ವಿನ್ಯಾಸ ಸಿದ್ಧಿಯಾಗುವವರೆಗೂ ತಳಮಳ ತಾಕಲಾಟಗಳೊಂದಿಗೆ ಮುರಿದು ಕಟ್ಟುವ ಕ್ರಿಯೆಗಳಲ್ಲಿ ಬೇಸರವಿಲ್ಲದೆ ಭಾಗಿಯಾಗುತ್ತಿದ್ದರು.

ಇವರ ಈ ಪ್ರವೃತ್ತಿಗೆ ಪೂರಕವೆನ್ನುವಂತೆ ಪ್ರಾಥಮಿಕ ಶಾಲೆಯಲ್ಲಿಯೇ ಗೂಡೋಡಗಿ ಎನ್ನುವ ಶಿಕ್ಷಕರು ಇವರ ಕಲಾಭಿವ್ಯಕ್ತಿಗೆ ಪ್ರೋತ್ಸಾಹ ನೀಡಹತ್ತಿದರು. ಹೀಗೆ ಬದುಕು, ಭವಿಷ್ಯ, ಕಲೆ, ಪ್ರೋತ್ಸಾಹಗಳಂತಹ ಗೊಂದಲದ ಅವಧಿಯಲ್ಲಿಯೇ ಅಣ್ಣ ಪಾಂಡುರಂಗರಿಗೆ ಬೆಳಗಾವಿಯಲ್ಲಿ ಪೋಲೀಸ್ ಪೇದೆ ಕೆಲಸ ಸಿಗುತ್ತದೆ. ಇದು ಧನಂಜಯ ಅವರ ಪ್ರೌಢ ಶಿಕ್ಷಣಾಭ್ಯಾಸಕ್ಕೆ ದಾರಿ ಮಾಡಿಕೊಡುತ್ತದೆ. ಹೀಗೆ ಬೆಳಗಾವಿಯ ಸರದಾರ ಹೈಸ್ಕೂಲಿನಲ್ಲಿ ಕಲಿಯುತ್ತಿರುವಾಗ ಸಿ.ವಿ.ಕಾರದಗಿ ಎನ್ನುವ ಶಿಕ್ಷಕರು ಶಿಲ್ಪಾಕೃತಿ ಮತ್ತು ಚಿತ್ರರಚನೆಗೆ ಪ್ರೋತ್ಸಾಹಿಸುತ್ತಿದ್ದರು. ಸತತ ಪರಿಶ್ರಮ ಮತ್ತು ಶ್ರದ್ಧೆಗಳ ಮೂಲಕ ಧನಂಜಯ ಶಿಲ್ಪಿಯವರನ್ನು ಉತ್ತಮ ಕಲಾವಿದನನ್ನಾಗಿ ರೂಪಿಸಿದರು. ಇಷ್ಟೇ ಅಲ್ಲ ಕಾರದಗಿ ಶಿಕ್ಷಕರೆ ಧನಂಜಯ ಶಿಲ್ಪಿಯವರನ್ನು ಚಿತ್ರಕಲಾ ಸಂಬಂಧಿ ಖರ್ಚುವೆಚ್ಚಗಳನ್ನು ಭರಿಸುತ್ತಿದ್ದರು. ಕಾರಣ ಕಿತ್ತು ತಿನ್ನುವ ಬಡತನದಿಂದಾಗಿ ಹುಡುಗ ಹಾಳೆ, ಬಣ್ಣ, ಬ್ರಶ್‌ಗಳಿಗೆ ಹಣವಿಲ್ಲದೆ ಪದೇ ಪದೇ ಶಾಲೆ ತಪ್ಪಿಸುತ್ತಿದ್ದ. ಈತನ ಜಾಣತನವನ್ನು ಕಂಡು ಗುರುಗಳು ಶಾಲೆ ತಪ್ಪಿಸದಂತೆ ನಿಗಾ ವಹಿಸುತ್ತಿದ್ದರು. ಕಾರದಗಿ ಗುರುಗಳು ಎಂಥ ಮಾತೃಹೃದಯಿ ಮತ್ತು ಕರುಣಾಮಯಿ ಎಂದರೆ ಸ್ವತಃ ತಾವೇ ಹಾಳೆ, ಬಣ್ಣ, ಬ್ರಶ್‌ಗಳನ್ನು ಕೊಡಿಸಿ ಹುಡುಗನ ಪ್ರಗತಿಗೆ ಕಾರಣವಾಗುತ್ತಾರೆ. ಈ ನನ್ನ ಕೊಡುಗೆಯಾದ ಕುಂಚಗಳಿಂದ ನಿನ್ನ ಕಲಾನೈಪುಣ್ಯತೆಯನ್ನು ಮೆರೆದು ತೋರಿಸು. ನಿನಗೆ ಬರುವ ಎಲ್ಲ ತೊಂದರೆಗಳನ್ನು ನಾನು ನಿವಾರಿಸುತ್ತೇನೆ . ಆದರೆ ಯಾವ ಕಾಲಕ್ಕೂ ಯಾವ ಕಾರಣಕ್ಕೂ ನೀನು ಚಿತ್ರ ಬರೆಯುವುದನ್ನು ನಿಲ್ಲಿಸದಿರು. ನಾ ಕೊಟ್ಟ ಈ ಕುಂಚ

ನಿನ್ನ ಬದುಕಿನ ದಿಕ್ಕನ್ನೇ ಬದಲಾಯಿಸುತ್ತದೆಂದು ಆಶೀರ್ವದಿಸುತ್ತಾರೆ. ಗುರುಗಳು ನೀಡಿದ ಒತ್ತಾಸೆ ಧನಂಜಯ ಅವರನ್ನು ಇಂದು ಬದಲಾಯಿಸುತ್ತದೆಂದು ಆಶೀರ್ವದಿಸುತ್ತಾರೆ. ಗುರುಗಳು ನೀಡಿದ ಒತ್ತಾಸೆ ಧನಂಜಯ ಅವರನ್ನು ಇಂದು ಶಿಲ್ಪಿಯನ್ನಾಗಿಸಿರುವುದು ಗಮನಾರ್ಹ. ಹೀಗೆ ತನುಮನ ಧನಗಳಿಂದ ತಮ್ಮನ್ನು ಬೆಳೆಸಿದ ಕಾರದಗಿ ಗುರುಗಳನ್ನು ಶಿಲ್ಪಿಯವರು ಈವತ್ತಿಗೂ ನೆನೆಸಿಕೊಂಡು ನನ್ನ ಪಾಲಿನ ದೇವರೆಂದು ಭಾವುಕರಾಗುತ್ತಾರೆ. ಅವರ ಮಾರ್ಗದರ್ಶನದಲ್ಲೆ ಕಲಾಕೃತಿ ಸ್ಪರ್ಧೆಯೊಂದರಲ್ಲಿ ಮೊಟ್ಟ ಮೊದಲಬಾರಿಗೆ 300 ರೂಪಾಯಿಗಳ ಪ್ರಥಮ ಬಹುಮಾನ ಪಡೆದರು. ಅಂದಿನ ಆ ಮುನ್ನೂರು ರೂಪಾಯಿ ಮೌಲ್ಯ ಮತ್ತು ಗೌರವವನ್ನು ಇಂದಿನ ಯಾವ ಪುರಸ್ಕಾರ ಪ್ರಶಸ್ತಿಗಳೂ ತಾರವು ಎಂದು ತುಂಬ ಅಭಿಮಾನದಿಂದ ಕೃತಜ್ಞತಾಪೂರ್ವಕವಾಗಿ ಶಿಲ್ಪಿಯವರು ಸ್ಮರಿಸುತ್ತಾರೆ.

ಬೆಳಗಾವಿಯ ಸರದಾರ ಹೈಸ್ಕೂಲಿನಲ್ಲಿ ಶಿಕ್ಷಣ ಪಡೆಯುವಾಗಲೇ ಶಿಲ್ಪಿಯವರ ಸೃಜನಾತ್ಮಕ ಪ್ರತಿಭೆಗೆ ತಕ್ಕ ಅವಕಾಶ ಮತ್ತು ಪ್ರೋತ್ಸಾಹಗಳು ಲಭಿಸಿದವು. ಬೆಳಗಾವಿಯ ಈ ಸರದಾರ ಹೈಸ್ಕೂಲ್ ಆವರಣ ಎಷ್ಟೋ ಜನ ಬಡ ಮತ್ತು ಮುಗ್ಧ ವಿದ್ಯಾರ್ಥಿಗಳಿಗೆ ಭಾಗ್ಯದ ಬಾಗಿಲು ತೆರೆದ ಬಗ್ಗೆ ಬಲ್ಲವರಿಂದ ಕೇಳಿದ್ದೇನೆ. ಇಲ್ಲಿರುವಾಗಲೇ ಬಹಳಷ್ಟು ಜನರಿಗೆ ಒಳ್ಳೊಳ್ಳೆ ಅವಕಾಶಗಳು ದೊರೆತು ಅವರು ಎತ್ತರಕ್ಕೇರಿದ ಬಗ್ಗೆ ಅಲ್ಲಿ ಕಲಿತವರು ಕಲಿಸಿದವರು ಹೆಮ್ಮೆಯಿಂದ ಹೇಳುತ್ತಾರೆ. ಅಂತಹ ಅವಕಾಶ ಪಡೆದು ಮೇಲೇರಿದವರಲ್ಲಿ ನಾನೂ ಕೂಡ ಒಬ್ಬ ಎನ್ನುವುದು ನನಗೆ ತುಂಬ ಅಭಿಮಾನದ ಸಂಗತಿ. ಹೀಗೆ ಧನಂಜಯ ಶಿಲ್ಪಿಯವರು ಇಲ್ಲಿ ಶಿಕ್ಷಣ ಪಡೆಯುವಾಗಲೇ 1954ರಲ್ಲಿ ಇಂಟರ್ ಮೀಡಿಯೆಟ್‌ನಲ್ಲಿ ಪ್ರಥಮ ರ್‍ಯಾಂಕ್ ಪಡೆದರು. ಇದು ಅವರಿಗೆ ಮತ್ತಷ್ಟು ಹೊಸದಾರಿಯನ್ನು ತೆರೆದಿಟ್ಟಿತು. ಆರಂಭದ ಕಲಿಕೆಯಲ್ಲಿ ಆಸಕ್ತಿಯಿರದಿದ್ದರೂ ಮುಂದೆ ಹೋದಂತೆ ಅದನ್ನು ರಕ್ತಗತವಾಗಿಸಿಕೊಂಡಿದ್ದಕ್ಕೆ ಅವರ ಹಲವಾರು ಅಕಾಡೆಮಿಕ್ ಸಾಧನೆಗಳು ಸಾಕ್ಷಿಯಾಗಿದೆ.

ಎಲಿಮೆಂಟರಿ ಗ್ರೇಡ್ ಪರೀಕ್ಷೆಗೆ ಶುಲ್ಕ ಕಟ್ಟದೇ ಶಾಲೆಬಿಟ್ಟ ಕ್ಷಣವನ್ನು ತುಂಬಾ ಭಾವಪೂರ್ವಕವಾಗಿ ಶಿಲ್ಪಿಯವರು ನೆನೆಸಿಕೊಳ್ಳುತ್ತಾರೆ. ಗುರುಗಳು ಶುಲ್ಕಕಟ್ಟಿದರೂ ಪರೀಕ್ಷೆಗೆ ಕೂಡಲು ಮಾನ್ಯತೆ ಸಿಗುವುದಿಲ್ಲ. ಆದರೆ ಗುರುಗಳ ಅನುಮತಿಯ ಮೇರೆಗೆ ಮುಂದಿನ ಯಾವ ವರ್ಗಕ್ಕೂ ಸೇರದೆ ಮುಂದಿನ ಪರೀಕ್ಷೆಗೆ ಕುಳಿತುಕೊಳ್ಳುತ್ತಾರೆ.

ಅಭ್ಯಾಸ ಅಷ್ಟಕ್ಕಷ್ಟೇ ಆಗಿದ್ದರೂ ಧೈರ್ಯದಿಂದ ಎದುರಿಸುತ್ತಾರೆ. ಆದರೆ ದುರದೃಷ್ಟವಶಾತ್ ಪ್ರಶಂಸೆ ಪಾರಿತೋಷಕ 200 ರೂಪಾಯಿ ಬಹುಮಾನದೊಂದಿಗೆ ಪರೀಕ್ಷೆಯಲ್ಲಿ ಮೊದಲಿಗರಾಗಿ ಪಾಸಾಗಿ ಶಾಲೆಗೆ ಕೀರ್ತಿ ತರುತ್ತಾರೆ. ಕಾರದಗಿ ಗುರುಗಳಂತೂ ನಕ್ಕುನಲಿಯುತ್ತಾರೆ. ಶಿಷ್ಯನ ಮುಂದಿನ ಭವಿಷ್ಯಕ್ಕಾಗಿ ಚಿಂತಿಸುತ್ತಾರೆ. ಆದರೆ ಮನೆಯಲ್ಲಿನ ಬಡತನ , ಓದಿಗೆ ತಿಲಾಂಜಲಿಯನ್ನಿತ್ತು ಕೆಲಸಕ್ಕೆ ಸೇರಲು ಪ್ರೇರೇಪಿಸುತ್ತದೆ. ಇದರಿಂದ ಮುಂಬೈ ಸೇರಿ ದೊಡ್ಡ ಕಲಾವಿದನಾಗಬೇಕೆನ್ನುವ ಅವರ ಕನಸು ಹಾಗೇ ಉಳಿಯುತ್ತದೆ. ಇಂಟರ್ ಮೀಡಿಯೆಟ್ ನಂತರ 1956ರಲ್ಲಿ ಅನಿವಾರ್ಯವಾಗಿ ಗ್ರಾಮಸೇವಕರಾಗಿ ಕೆಲಸಕ್ಕೆ ಸೇರಿಕೊಳ್ಳುತ್ತಾರೆ. ತಿಂಗಳಿಗೆ 110 ರೂಪಾಯಿ ಸಂಬಳ. ಮುಂದೆ 1957ರಿಂದ 1960ರವರೆಗೆ ಸೋಸಿಯಲ್ ವೆಲ್ಫೇರ್ ಇನ್ಸ್ಪೆಕ್ಟರಾಗಿ ಸೇವೆ ಮಾಡುತ್ತಾರೆ. ಶ್ರದ್ಧೆ ಗುರಿಗಳಿದ್ದರೂ ಬದುಕು ಕರೆದತ್ತ ಒಮ್ಮೊಮ್ಮೆ ಹೋಗಬೇಕಾಗುತ್ತದೆ ಎನ್ನುವುದಕ್ಕೆ ಶಿಲ್ಪಿಯವರ ಬದುಕೇ ಸಾಕ್ಷಿಯಾಗಿದೆ. ನಂತರ 1961ರ ಹೊತ್ತಿಗೆ ಉದ್ಯೋಗಸ್ಥ ಜೀವನ ಬೇಸರವಾಗಿ ಓದಬೇಕೆನ್ನುವ ಅಭೀಪ್ಸೆ ಉತ್ಕಟವಾಗುತ್ತದೆ. ಉನ್ನತ ಕಲಾಭ್ಯಾಸಕ್ಕಾಗಿ ಮುಂಬೈನ ಪ್ರತಿಷ್ಠಿತ ಜೆ.ಜೆ. ಕಲಾಶಾಲೆಗೆ ಸೇರಿಕೊಳ್ಳುತ್ತಾರೆ. ಮನೆಯಿಂದ ಬರುತ್ತಿದ್ದ 50 ರೂಪಾಯಿಗಳು ಮುಂಬೈಯಂತಹ ಶಹರದಲ್ಲಿ ಬದುಕು ಸಾಗಿಸಲು ಸಾಲುತ್ತಿರಲಿಲ್ಲ. ಹೀಗಾಗಿ ಇನ್ನುಳಿದ ಖರ್ಚಿಗಾಗಿ ಬಹಳ ಪರಿತಪಿಸುತ್ತಿದ್ದರು. ಇಂಥ ಸಮಯದಲ್ಲಿ ವರ್ಲಿ ಬಿ ಡಿ ಡಿ ಬೌಳನಲ್ಲಿ ವಾಸವಾಗಿದ್ದ ದೂರದ ಸಂಬಂಧಿ ಹನುಮಂತಪ್ಪ ಮತ್ತು ಮಾಳವ್ವ ದಂಪತಿಗಳು ತಿಂಗಳಿಗೆ 30 ರೂಪಾಯಿ ಖರ್ಚಿಗೆ ಕೊಟ್ಟು ಇರಹತ್ತಿದ್ದರು. ಇವರ ಶ್ರಮ, ಸಜ್ಜನಿಕೆ ಸಚ್ಚಾರಿತ್ರಗಳು ಬಹುಬೇಗ ದಂಪತಿಗಳ ಮನಗೆದ್ದವು. ಅಷ್ಟೇ ಅಲ್ಲ ಅವರ ಮನೆತನವನ್ನೇ ಊರ್ಜಿತಗೊಳಿಸಿದವು. ಹೀಗಿರುತ್ತಿರಲಾಗಿ ಪ್ರಥಮ ವರುಷವೇ ಅವರು ಉನ್ನತ ಶಿಕ್ಷಣದಲ್ಲಿ ಪ್ರಥಮ ರ್‍ಯಾಂಕ್‌ನೊಂದಿಗೆ ಕಲಿಕೆಯಲ್ಲಿ ಮೇಲುಗೈ ಸಾಧಿಸುತ್ತಾರೆ. ಅದೇ ಸಂದರ್ಭದಲ್ಲಿ ತಮ್ಮ ಜಾಣತನಕ್ಕಾಗಿ ಒಂದೇ ಸಲಕ್ಕೆ ಡಬಲ್ ಪ್ರಮೋಷನ್ ಮೂಲಕ ಮೂರು ಶಿಷ್ಯವೇತನಗಳನ್ನು ವ್ಯಾಸಂಗದುದ್ದಕ್ಕೂ ಪಡೆಯುತ್ತಾರೆ. 1. ಮಹಾರಾಜ್ ಆಫ್ ಕಚ್ ಎಂಡೋಮೆಂಟ್ ಸ್ಕಾಲರ್‌ಶಿಫ್ 2. ಸೆಂಟ್ರಲ್ ಗೌರ್ನಮೆಂಟ್ ಮೆರಿಟ್ ಸ್ಕಾಲರ್ ಶಿಪ್ 3. ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್ ಮೆರಿಟ್ ಸ್ಕಾಲರ್‌ಶಿಫ್ ಎನ್ನುವ ಪ್ರತಿಷ್ಠಿತ ಶಿಷ್ಯವೇತನಗಳು ಅವರ ಅರ್ಥಪೂರ್ಣ ಕಲಿಕೆ ದಾಹವನ್ನು ಇಮ್ಮಡಿಗೊಳಿಸುತ್ತವೆ. ಹೀಗೆ ಒಂದೇ ಸಲಕ್ಕೆ ಮೂರು ಸ್ಕಾಲರ್ ಶಿಫ್ ಪಡೆದ ಹೆಗ್ಗಳಿಕೆ. 1964ರಲ್ಲಿ ಅಂತಿಮ ವರುಷದ

ಗೌರಮೆಂಟ್ ಡಿಪ್ಲೊಮಾ ಸ್ಕಲ್ಪಚರ್ ಆ್ಯಂಡ್ ಮಾಡಲಿಂಗ್ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕಿನಲ್ಲಿ ಪಾಸಾಗುತ್ತಾರೆ. ಕಲಾ ವ್ಯಾಸಂಗದ ಸಮಯದಲ್ಲಿಯೇ ಪ್ರಸಿದ್ಧ ಶಿಲ್ಪಿಗಳಾದ ಶ್ರೀ ನಾನಾ ಕರ್‌ಮರ್‌ಕರ್, ಬಳವಂತರಾಮ ತಾಲೀಮ ಹಾಗೂ ಶ್ರೀಕಾಂತ ಎನ್ನುವವರ ಸಂಪರ್ಕದಲ್ಲಿ ಕೆಲಸ ಮಾಡಿದ ಅನುಭವವೂ ಧನಂಜಯ ಶಿಲ್ಪಿಯವರದ್ದು. ಇಷ್ಟಾದರೂ ಅವರ ಹಣಕಾಸಿನ ಸಮಸ್ಯೆ ಬಗೆಹರಿಯಲೇ ಇಲ್ಲ. ಒಂದೊಂದು ಸಲ ಬಸ್‌ಚಾರ್ಜಿಗೆ 10ಪೈಸೆ ಇರದೆ 25ಕಿ.ಮೀಗಳ ತನಕ ಕಾಲೇಜಿಗೆ ನಡೆದುಕೊಂಡು ಹೋದದ್ದೂ ಇದೆ. ಶಿಲ್ಪಂ ಎಂಬ ಸ್ಟುಡಿಯೋದಲ್ಲಿ ಹಾಗೂ ಹೀಗೂ ಮಾಡಿ ಕೆಲಸ ಗಿಟ್ಟಿಸುತ್ತಾರೆ. ಅವರು ಕೊಡುವ ಅರವತ್ತು ರೂಪಾಯಿಗಳಿಗೆ ಎಂಟು ತಾಸು ದುಡಿಯಬೇಕಾಗುತ್ತದೆ. ಇದರಿಂದ ಹೋಗುವುದು ತಡವಾಗಿ ಶಿಕ್ಷಕರಿಂದ ಬೈಸಿಕೊಳ್ಳುವ ಪ್ರಸಂಗಗಳೂ ಎದುರಾಗುತ್ತವೆ. ಇದಕ್ಕೆ ಪರಿಹಾರವಾಗಿ ಶಿಲ್ಪ ಭಾರತಿ ಎನ್ನುವಲ್ಲಿ ಕೆಲಸ ಹುಡುಕಿಕೊಂಡು ಮೂರೇ ದಿನದಲ್ಲಿ ಒಂದು ಅದ್ಭುತ ಪುತ್ಥಳಿಯನ್ನು ಮಾಡಿ ಐದುನೂರು ರೂಪಾಯಿಗಳ ಮೆಚ್ಚುಗೆಯನ್ನು ಪಡೆಯುತ್ತಾರೆ. ಐವತ್ತು ರೂಪಾಯಿಗಳಿಗೆ ಪರದಾಡುವವರಿಗೆ ಐದುನೂರು ರೂಪಾಯಿ ಸಿಕ್ಕಾಗ ಏನಾಗಬಹುದು? ಪಾರವೇ ಇಲ್ಲದೆ ಕುಣಿದರು. ಹೀಗೆ ಕೊನೆಯ ವರ್ಷದ ಪರೀಕ್ಷೆ ಮುಗಿಯುವವರೆಗೂ ಶಿಲ್ಪ ಭಾರತಿಯಲ್ಲಿಯೇ ಕೆಲಸ ಮಾಡಿದರು. ಹೀಗಿರುವಾಗ ಕ್ರಿಶ್ಚಿಯನ್ ಸಮಾಧಿಗಳ ಮೇಲೆ ಮಾರ್ಬಲ್ ಮೂರ್ತಿಗಳನ್ನು ತಯಾರಿಸಿ ಕೊಡುವ ಫರ್ನಾಂಡಿಸ್ ಎಂಬ ಗುತ್ತಿಗೆದಾರನ ಪರಿಚಯವಾಗುತ್ತದೆ. ಇದರಿಂದ ರಾತ್ರಿ-ಹಗಲೆನ್ನದೆ ದುಡಿಯುವ ಪ್ರಸಂಗಗಳು ಬರುತ್ತವೆ.

ನಂತರ ಮತ್ತೆ ಮಾಡಲಿಂಗ್ ಕ್ಷೇತ್ರಕ್ಕೆ ತಿರುಗುತ್ತಾರೆ. ಜರ್ಮನಿಯ ಫೈಬರ್ ಗ್ಲಾಸ್ ತಜ್ಞನೊಬ್ಬನಿಗೆ ಮಾಡೆಲ್‌ಗಳನ್ನು ಮಾಡಿ ಅವುಗಳ ಮೋಲ್ಡ ತೆಗೆಯುವುದು ಕಾಸ್ಟಿಂಗ್ ಮಾಡುವುದು ಮುಂತಾದ ಕೆಲಸ ಮಾಡಿಕೊಟ್ಟು 800.00ರೂ. ಸಂಬಳ ಪಡೆಯುತ್ತಿರುತ್ತಾರೆ. ನಂತರ ಆ ಸಂಸ್ಥೆಯಲ್ಲಿಯೇ ಪ್ರತಿಶತ 25ರಷ್ಟು ಪಾಲು ದಾರಿಕೆಯೊಂದಿಗೆ ಪರಿಶ್ರಮದಿಂದ ಕೆಲಸ ಮಾಡಿ ಸಂಸ್ಥೆಯ ಉನ್ನತೀಕರಣಕ್ಕೆ ಕಾರಣರಾಗುತ್ತಾರೆ. ಇಂಥ ಅದ್ಭುತ ಶಿಲ್ಪಕಾರನ ಕಲೆಗಾರಿಕೆಯನ್ನು ಕಂಡು ಕಲಕತ್ತೆಯ ಬೆಂಗಾಲ ಪಾಟ್ರಿಚ್ ಎಂಬ ಬ್ರಿಟಿಷ್ ಇಂಥ ಅದ್ಭುತ ಶಿಲ್ಪಕಾರನ ಕಲೆಗಾರಿಕೆಯನ್ನು ಕಂಡು ಕಲಕತ್ತೆಯ ಬೆಂಗಾಲ ಪಾಟ್ರಿಚ್ ಎಂಬ ಬ್ರಿಟಿಷ್ ಕೊಲಾಬರೆಟೆಡ್ ಕಂಪೆನಿಯು ಇವರನ್ನು ಚೀಫ್ ಮಾಡಲರ್ ಹುದ್ದೆಗೆ ಆಹ್ವಾನಿಸುತ್ತದೆ. ಅಲ್ಲಿ ಕೆಲಕಾಲ ಸೇವೆಗೈಯುತ್ತಿರುವಾಗಲೇ

ತಮ್ಮ ವಿದ್ಯಾದಾಯಿನಿ ಜೆ.ಜೆ. ಕಲಾ ಶಾಲೆಯ ಉಪನ್ಯಾಸಕ ಹುದ್ದೆಗೆ ಕರೆಬರುತ್ತದೆ. ಅಲ್ಲಿ ಸ್ಕಲ್ಪಚರ್ ಡಿಪಾರ್ಟ್‌ಮೆಂಟಿನಲ್ಲಿ ಉಪನ್ಯಾಸಕರಾಗಿ ಸ್ಮರಣೀಯ ಸೇವೆ ಸಲ್ಲಿಸುತ್ತಾರೆ. ಇಲ್ಲಿ ಕಲ್ಲುಕೆತ್ತನೆ ವಿಭಾಗವನ್ನು ಸ್ಥಾಪಿಸಿ ಅಧ್ಭುತವಾಗಿ ಬೆಳೆಸಿದ ಕೀರ್ತಿ ಶಿಲ್ಪಿಯವರಾಗಿದ್ದಾಗಿದೆ. ಶಿಲ್ಪಿಯವರ ಕನಸು ಮತ್ತು ಕ್ರಿಯೆಗಳ ಸಾಕ್ಷಾತ್ಕಾರಗಳ ಸಾಕಾರ ರೂಪವನ್ನು ಇಲ್ಲಿ ಕಾಣಬಹುದಾಗಿದೆ.

ಯಾವ ಶಾಲೆಗೆ ಸೇರಿ ಖ್ಯಾತಿಗಳಿಸಬೇಕೆಂದು ಬೊಂಬಾಯಿಗೆ ಹೋಗಿದ್ದರೋ ಅದನ್ನು ಸಾಧಿಸಿ ಅದೇ ಶಾಲೆಯಲ್ಲಿ (ಜೆ.ಜೆ.ಕಲಾ) ಶಾಲೆ ಉಪನ್ಯಾಸಕರಾಗಿ, ಅಲ್ಲಿನ ವ್ಯವಸ್ಥೆಗೆ ಹೇಸಿ ರಾಜಿನಾಮೆ ನೀಡಿ ಹೊರಬರಬೇಕಾಯಿತು. ವಿದ್ಯಾರ್ಥಿಯಾಗಿ ಕಾಲೇಜು ಸೇರಿಸಿಕೊಳ್ಳುವಾಗಲೇ ಅವರಿಗೆ ಅವಮಾನವಾಗಿತ್ತು. ಕೊನೆಗೆ ಪ್ರಯಾಸದಿಂದ ಅಲ್ಲಿನ ಪಟವರ್ಧನ ಎನ್ನುವ ಕ್ಲರ್ಕ್ ಸಹಾಯದಿಂದ ಸೇರಿಸಿಕೊಳ್ಳುತ್ತಾರೆ. ಒಂದು ವರ್ಷದೊಳಗೆ ತಮ್ಮ ಶ್ರದ್ಧೆಯಿಂದಾಗಿ ದೂಷಿಸಿದವರ ಆತ್ಮೀಯ ಶಿಷ್ಯರಾಗಿ ರೂಪುಗೊಳ್ಳುತ್ತಾರೆ. ಇದಕ್ಕೆ ಧನಂಜಯ ಅವರು ಒಂದು ನಿದರ್ಶನ ಕೊಡುತ್ತಾರೆ.

ಅಲ್ಲಿನ ಸೀನಿಯರ ವಿದ್ಯಾರ್ಥಿಗಳಿಗೆ ಒಂದು ಮೂರ್ತಿ ಕೆತ್ತಲು ಮಂಜ್ರೇಕರ್ ಎನ್ನುವ ಗುರುಗಳು ಹೇಳಿದಾಗ ಎರಡು ತಿಂಗಳಾದರೂ ಅದು ಮುಗಿಯಲಿಲ್ಲವಂತೆ. ಆಸೆಯಿಂದ ಧನಂಜಯ ಅವರು ನನಗೂ ಒಂದು ಕಲ್ಲುಕೊಡಿ ಮೂರ್ತಿ ಕೆತ್ತುತ್ತೇನೆ ಎಂದು ಕೇಳಿದಾಗ ಗುರುಗಳು ನೀನು ಜ್ಯೂನಿಯರ್ ನಿನಗೆ ಮೂರ್ತಿ ಕೆತ್ತಲು ಹೇಗೆ ಬಂದೀತು ಎಂದು ಅವಹೇಳನ ಮಾಡಿ ಕೆಲಸಕ್ಕೆ ಬಾರದ ಕಲ್ಲೊಂದನ್ನು ಕೊಟ್ಟರಂತೆ. ಆತ್ಮವಿಶ್ವಾಸಿ ಹಠವಾದಿಯಾಗಿದ್ದ ಶಿಲ್ಪಿಯವರು ಮೂರು ದಿನದಲ್ಲಿಯೇ ಅದ್ಭುತವಾದ ನಾಟ್ಯ ಸರಸ್ವತಿ ಪ್ರತಿಮೆಯನ್ನು ಕಡೆದು ನಿಲ್ಲಿಸಿದರಂತೆ ಆಗ ಇವರ ಡೀನ್ ಮತ್ತು ಮುಖ್ಯಸ್ಥರು ಹೊಗಳಿ ವಿಸ್ಮಯ ಪಟ್ಟರಂತೆ . ಅಂದಿನಿಂದ ನಿನಗೆ ಯಾವ ತೊಂದರೆ ಬಂದರೂ ಕೇಳು ಸಹಾಯ ಮಾಡುತ್ತೇವೆ ಎಂದು ಬೆನ್ನು ಚಪ್ಪರಿಸಿದರಂತೆ. ಹೀಗೆ ಉಪೇಕ್ಷೆ ಮಾಡಿದ ಮಂದಿಯೇ ನನ್ನ ಹತ್ತಿರ ಕರೆದು ನನ್ನ ಕಲಾ ಪೋಷಣೆ ಮಾಡಿದರು ಎಂದು ತುಂಬ ಅಭಿಮಾನದಿಂದ ಹೇಳಿಕೊಳ್ಳುತ್ತಾರೆ. ಸತತ ಹನ್ನೆರಡು ವರ್ಷಗಳ ಕಾಲ ಜೆ.ಜೆ. ಸ್ಕೂಲಿನಲ್ಲಿ ಸೇವೆ ಸಲ್ಲಿಸಿ ಕಾಲೇಜಿಗೆ ದೊಡ್ಡ ಹೆಸರು ತಂದುಕೊಟ್ಟರೂ ಇವರ ಏಳ್ಗೆಯನ್ನು

ಸಹಿಸದ ಸಹೋದ್ಯೋಗಿಗಳು ಇವರ ಸೂಕ್ಷ್ಮ ಮನಸ್ಸಿನ ಮೇಲೆ ದೊಡ್ಡ ಆಘಾತ ಮಾಡುತ್ತಾರೆ. ಡೀನ್ ಆಗುವ ಹಂತದಲ್ಲಿದ್ದರೂ ಸ್ಥಾನದ ಹಂಗು ತೊರೆದು ಅಲ್ಲಿಂದ ರಾಜೀನಾಮೆ ನೀಡಿ ಹೊರಬಂದು ಆತ್ಮಾಭಿಮಾನ ಮೆರೆಯುತ್ತಾರೆ. ಇದರಿಂದ ಕೆಲವರು ದಿಗ್ಮೂಢರಾದರೆ ಕೆಲವರು ಖುಷಿ ಪಡುತ್ತಾರೆ. ಧನಂಜಯ ಅವರ ವಿದ್ವತ್‌ನ್ನು ಕಂಡ ವಿದ್ಯಾರ್ಥಿಗಳು ಹರತಾಳ ಮತ್ತು ತರಗತಿ ಬಹಿಷ್ಕಾರಗಳ ಮೂಲಕ ಧನಂಜಯ ಶಿಲ್ಪಿಯವರ ಸೇವೆ ಪಡೆಯಲು ಹೋರಾಟ ಮಾಡುತ್ತಾರೆ. ಅಂದಿನ ಶಿಕ್ಷಣ ಮಂತ್ರಿ ಮಧುಕರರಾವ್ ಚೌದ್ರಿಯವರ ಮೂಲಕ ಅವರು ಯಶಸ್ಸನ್ನು ಸಾಧಿಸುತ್ತಾರೆ. ಶಿಲ್ಪಿಯವರು ವಿದ್ಯಾರ್ಥಿಗಳ ಕರೆಗೆ ಓಗೊಟ್ಟು ಮತ್ತೇ ಕೆಲಸಕ್ಕೆ ಹಾಜರಾಗುತ್ತಾರೆ. ಆದರೇ ಅಲ್ಲಿನ ಕಲುಷಿತ ರಾಜಕೀಯಕ್ಕೆ ಬೇಸತ್ತು 1980ರಲ್ಲಿ ಸಂಪೂರ್ಣ ರಾಜಿನಾಮೆ ಸಲ್ಲಿಸಿ ಹೊರಬಂದರು.

### ಶಿಲ್ಪಿಯವರ ಸಂಸಾರಿಕ ಬದುಕು

ಸದಾ ಕ್ರಿಯಾಶೀಲ ಪ್ರವೃತ್ತಿಯುಳ್ಳ ಮತ್ತು ಕಲೋಪಾಸಕರಾದ ಧನಂಜಯ ಶಿಲ್ಪಿಯವರಿಗೆ ಒಂದೆಡೆ ಜಡವಾಗಿ ಇರುವುದೆಂದರೆ ಆಗದು. ಹೀಗಾಗಿಯೇ ಅವರು ತಮಗೆ ಸಿಕ್ಕಿದ್ದ ಗ್ರಾಮಸೇವಕ ನೌಕರಿಯಿಂದ ರಾಜಿನಾಮೆ ನೀಡಿ ಹೊರಬಂದು ಸೋಸಿಯಲ್ ವೆಲ್‌ಫೇರ್ ಇನ್ಸ್ ಪೆಕ್ಟರ್‌ರಾಗಿ ನೇಮಕಗೊಂಡರು. ಇಲ್ಲಿರುವಾಗಲೇ ಅವರಿಗೆ ಜೇವಂತಿಬಾಯಿ ಜೊತೆ ಸ್ನೇಹ ಬೆಳೆಯಿತು. ಈ ಸ್ನೇಹ ಪ್ರೀತಿ ಮತ್ತು ಮದುವೆಯಲ್ಲಿ ವಂಶವೃಕ್ಷವಾಗಿ ಬೆಳೆಯಿತು. ಜೇವಂತಿಬಾಯಿಯವರೂ ಕೂಡ ಬಿ.ಡಿ.ಓ. ಆಫೀಸಿನಲ್ಲಿ ಸಹಾಯಕಿಯಾಗಿ ಸೇವೆ ಸಲ್ಲಿಸುತ್ತಿದ್ದರು. 1957ರಲ್ಲಿ ಹಂಪಿ ವಿರೂಪಾಕ್ಷನ ಸನ್ನಿಧಿಯಲ್ಲಿ ಗಂಡ ಹೆಂಡತಿಯಾಗಿ ತುಂಬು ಜೀವನಕ್ಕೆ ಕಾಲಿಟ್ಟರು. ಒಟ್ಟು ಒಂಭತ್ತು ಜನ ಮಕ್ಕಳು. ಮೊದಲ ಹೆಣ್ಣು ಮತ್ತು ಗಂಡು ಮಕ್ಕಳು ತೀರಿಕೊಂಡಿದ್ದಾರೆ. ಇನ್ನುಳಿದವರಾದ ಸುಜಾತಾ, ಸಂಜಯ, ಸುನೀಲ ಪದ್ಮಿನಿ, ಭರತ, ಶಿವಕುಮಾರ, ಮಿಲಿಂದ. ಇವರು ಎಲ್ಲರೂ ತಮ್ಮ ತಮ್ಮ ಜವಾಬ್ದಾರಿಯಲ್ಲಿ ಸಕ್ರಿಯವಾಗಿದ್ದಾರೆ. ಸಂಜಯ ಎನ್ನುವ ಮಗ ಅಮೇರಿಕದಲ್ಲಿ ಕಂಪ್ಯೂಟರ್ ಇಂಜನಿಯರಾಗಿದ್ದಾರೆ. ಕಲಾಕೃತಿಗಳ ಕೆತ್ತನೆಯಲ್ಲಿ ತಂದೆಯಂತೆ ಮುಂದುವರಿದಿದ್ದಾರೆ. ಹಾಗೆ ಸುನೀಲ ಎಂಬ ಮಗ ಅಂಗವಿಕಲನಾದರೂ ಸಂಕಲ್ಪಶಕ್ತಿಯುಳ್ಳವ. ಈತ

ಕಮರ್ಷಿಯಲ್ ಡಿಪಾರ್ಟ್‌ಮೆಂಟಲ್ಲಿ ಎಸ್.ಡಿ.ಎ. ಆಗಿದ್ದಾರೆ. ಭರತ ಉಪನ್ಯಾಸಕರಾಗಿದ್ದರೂ ಕಲಾಕೃತಿ ರಚನೆಯಲ್ಲಿ ಎತ್ತಿದ ಕೈ. ಹಾಗೆ ಶಿವಕುಮಾರ ಎಂಬುವವರು ಗುಲಬರ್ಗಾದಲ್ಲಿ ಛಾಯಾಗ್ರಾಹಕರಾಗಿದ್ದಾರೆ. ಚಿತ್ರಕಲೆಯಲ್ಲಿ ಪ್ರಾವಿಣ್ಯವುಳ್ಳವರಾಗಿದ್ದಾರೆ. ಹಾಗೆ ಮಿಲಿಂದ ಕೂಡ ಕಲಾಸಕ್ತರೆಂಬುದು ಗಮನಾರ್ಹ. ಈ ರೀತಿಯಾಗಿ ಮಕ್ಕಳಲ್ಲೂ ಕೂಡ ಕಲಾಸೇವೆ ಮುಂದುವರಿದಿರುವುದು ಕಂಡುಬರುತ್ತದೆ. ಆದರೆ ಇವರಾರು ಪರಿಪೂರ್ಣವಾಗಿ ಶಿಲ್ಪ ಮತ್ತು ಚಿತ್ರಕಲೆಯನ್ನೇ ಅವಲಂಬಿಸಿ ಬದುಕುತ್ತಿಲ್ಲ ಎಂಬುದು ಗಮನಾರ್ಹ. ಇಷ್ಟು ಮಕ್ಕಳನ್ನು ಧನಂಜಯಶಿಲ್ಪಿಯವರ ಕೈಗಿತ್ತು ಜೇವಂತಿಬಾಯಿಯವರು 1988 ರಲ್ಲಿ ನಿಧನರಾದರು. ಬದುಕು ಹಳಿತಪ್ಪಿದರೂ ತ್ರಿವಿಕ್ರಮನಂತೆ ಛಲ ಬಿಡದೆ ಉಳಿದ ಬದುಕನ್ನು ಕಳೆಯುತ್ತಿದ್ದಾರೆ. ರಕ್ತದ ಕಣಕಣಗಳಲ್ಲಿ ಜೇವಂತಿಬಾಯಿಯನ್ನು ತುಂಬಿಕೊಂಡಿರುವ ಧನಂಜಯ ಶಿಲ್ಪಿಯವರು ಹೆಂಡತಿ ಸಾವನ್ನು ಒಂದು ದೈಹಿಕ ಬಿಡುಗಡೆಯಾಗಿ ಮಾತ್ರ ಸ್ವೀಕರಿಸಿದರು. ಇನ್ನುಳಿದಂತೆ ಅವರ ಎಲ್ಲ ಸೃಜನಶೀಲ ಚಟುವಟಿಕೆಗಳ ಹಿಂದಿನ ಕತೃತ್ವಶಕ್ತಿಯಾಗಿ ಇಂದಿಗೂ ಅವರು ಜೇವಂತಿಬಾಯಿಯವರನ್ನು ಜೀವಂತವಾಗಿ ಗರ್ಭೀಕರಿಸಿಕೊಂಡಿದ್ದಾರೆ.

## ಶಿಲ್ಪಿಯವರ ಕಲಾಕೃತಿಗಳು

ಶಿಲ್ಪಿಯವರ ಕಲಾಕೃತಿಗಳೆಂದರೆ ಅವು ವಾಸ್ತವ ಬದುಕಿನ ವೈವಿಧ್ಯತೆ ಮತ್ತು ವೈರುಧ್ಯತೆಗಳನ್ನು ಸಮರ್ಥವಾಗಿ ಪ್ರತಿಬಿಂಬಿಸುವ ಅರ್ಥಪೂರ್ಣ ರಚನೆಗಳು ಅಲ್ಲಿ ಶುಷ್ಕ ಜೀವನಪ್ರೀತಿಗೆ, ಒಣಪಾಂಡಿತ್ಯಕ್ಕೆ ಜಾಗವಿಲ್ಲ. ಸ್ವತಃ ಶಿಲ್ಪಿಯವರ ಬದುಕೇ ಹಲವಾರು ತಿರುವುಗಳಿಂದ ಸಂಯೋಜಿತಗೊಂಡಂಥದ್ದು. ಸಹಜವಾಗಿ ಬದುಕಿನ ಎಲ್ಲ ನೈಜತೆಗಳನ್ನು ತಾವು ರಚಿಸುವ ರೂಪಗಳಲ್ಲಿ ಔಚಿತ್ಯಪೂರ್ಣವಾಗಿ ಬಿಡಿಸಿ ನಿಲ್ಲಿಸುತ್ತಾರೆ.

ಕಲ್ಲು, ಸಿಮೆಂಟು, ಲೋಹ, ಪ್ಲಾಸ್ಟರ್ ಆಪ್ ಪ್ಯಾರಿಸ್ ಹೀಗೆ ವಿವಿಧ ಮಾಧ್ಯಮಗಳಲ್ಲಿ ಸುಂದರ ಪ್ರತಿಮೆಗಳನ್ನು ಮಾಡಿ ದೇಶ ಮತ್ತು ಹೊರದೇಶದಲ್ಲಿ ಕೀರ್ತಿಪಡೆದಿದ್ದಾರೆ. ಧನಂಜಯ ಶಿಲ್ಪಿಯವರ ಅಮೃತ ಶಿಲೆಯಲ್ಲಿ ಕೆತ್ತಿದ ಮಲಗಿದ ಯುವತಿ, ನ್ಯಾಯದೇವತೆ, ತಾಯಿ ಮಗುವಿನ ಆಕೃತಿಗಳು ಅವರಿಗೆ ದೊಡ್ಡ

ಗೌರವವನ್ನು ತಂದುಕೊಟ್ಟವು. ಇದಲ್ಲದೆ ಬುದ್ಧ ಅಂಬೇಡ್ಕರ್, ಶಿವಾಜಿ ಇಂಥಹ ಉಬ್ಬುಶಿಲ್ಪಗಳನ್ನು ಹೋಟೆಲ್ ಮತ್ತು ಅಪಾರ್ಟ್‌ಮೆಂಟ್‌ಗಳಲ್ಲಿ ಭಿತ್ತಿ ಶಿಲ್ಪಾಲಂಕಾರವನ್ನು ಮಾಡಿದ ಕೀರ್ತಿ ಶಿಲ್ಪಿಯವರದ್ದಾಗಿದೆ. ಮುಂಬೈಯಿಯ ಪ್ರಸಿದ್ಧ ಹೋಟೆಲ್‌ಗಳಾದ ಸಾಮ್ರಾಟ್ ಮತ್ತು ಹೋಟೆಲ್ ಒಬೆರಾಯದಲ್ಲಿ ಶಿಲ್ಪಿಯವರು ಮಾಡಿದ ಭಿತ್ತಿಚಿತ್ರ ಪ್ಯಾನಲ್‌ಗಳು, ಭಿತ್ತಿ ಶಿಲ್ಪಗಳು. ಈ ಹೋಟೆಲ್‌ಗಳ ಶೃಂಗಾರ ಮತ್ತು ಜನಪ್ರಿಯತೆಯನ್ನು ಹೆಚ್ಚುಮಾಡಿವೆ. ಹಾಗೇ ಅಟ್ಲಾಸ್ ಮತ್ತು ಸೇನಾವಾಲ್ ಅಪಾರ್ಟ್‌ಮೆಂಟ್ಸ್‌ನಲ್ಲಿನ ಉಬ್ಬು ಚಿತ್ರಗಳ ಅಲಂಕಾರ, ಮುಂಬೈನ ಬೆಂಗಾಲ ಕೆಮಿಕಲ್ಸ್‌ನ ಉಬ್ಬುಶಿಲ್ಪಗಳು ಧನಂಜಯಶಿಲ್ಪಿಯವರ ಕೈ ಚಮತ್ಕಾರದ ಪ್ರಸಿದ್ಧ ಮಾದರಿಗಳಾಗಿವೆ. ಶಿಲ್ಪಿಯವರಿಗೆ ಅಮೃತಶಿಲೆಯ ಕೆಲಸ ಅಂದರೆ ಅಚ್ಚುಮೆಚ್ಚು. ಕಾರಣ ಅವರ ಆರ್ಥಿಕಸ್ಥಿತಿ ಇದರಿಂದ ಸುಧಾರಿಸುತ್ತಿತ್ತು. ಕಮರ್ಷಿಯಲ್ ದೃಷ್ಟಿಯಿಂದ ಅಮೃತ ಶಿಲೆಯಲ್ಲಿ ಆಕೃತಿ ಮೂಡುವುದೂ ಹೆಚ್ಚು ಲಾಭದಾಯಕವೂ ಆಗಿತ್ತು. ಕಮರ್ಷಿಯಲ್ ಜಗತ್ತಿನಲ್ಲಿ ಈ ಮೂಲಕ ಶಿಲ್ಪಿಯವರಿಗೆ ಒಂದು ಪ್ರವೇಶ ದೊರೆತರೂ ಅದು ಹೊಟ್ಟೆ ಬಟ್ಟೆಗೆ ಮಾತ್ರ ಸಾಕಾಗುವಂತಾಯಿತು.. ಹೀಗಿದ್ದರೂ ಶಿಲ್ಪಿಯವರ ಅಮೃತಶಿಲಾ ಪುತ್ಥಳಿಗಳು ಹೆಚ್ಚು ಗೌರವವನ್ನು ಅವರಿಗೆ ತಂದುಕೊಟ್ಟವು.

ಇದೂ ಅಲ್ಲದೆ ಹಲವಾರು ವ್ಯಕ್ತಿನಿಷ್ಟ ಮತ್ತು ಕಂಚಿನ ಪ್ರತಿಮೆಗಳನ್ನು ಕಡೆದಿಟ್ಟ ಶ್ರೇಯಸ್ಸು ಧನಂಜಯ ಶಿಲ್ಪಿಯವರದಾಗಿದೆ. ಗುಲಬರ್ಗಾದ ಶ್ರೀ ಶರಣಬಸವೇಶ್ವರ ಕಾಲೇಜಿನಲ್ಲಿ ಅಮೃತ ಶಿಲೆಯಲ್ಲಿ ಕಡೆದಿಟ್ಟ ಎದೆಮಟ್ಟದ ಶ್ರೀ ದೊಡ್ಡಪ್ಪ ಅಪ್ಪ ಅವರ ಅದ್ಭುತ ಪ್ರತಿಮೆ, ವಿಲೇಪಾರ್ಲೆಯ ಮಿಟ್ಟಿಭಾಯಿ ಇಂಜಿನಿಯರಿಂಗ್ ಕಾಲೇಜಿನಲ್ಲಿ 18 ಅಡಿ ಎತ್ತರದ ಸಿಮೆಂಟಿನ ಇಂಜಿನಿಯರ್ ಸಿಂಬಾಲಿಕ್ ಫಿಗರ್ ಮತ್ತು ಇಂಜಿನಿಯರ್ ವಿಷಯದ ಮೇಲೆ ರಚಿಸಲಾಗದ ಭಿತ್ತಿ ಚಿತ್ರಗಳು, ಹಾಗೆ ಸಿಂಧಿಯಾ ನೆವಿಗೇಶನ್ ಕಂಪೆನಿಯಲ್ಲಿನ ಸಂಸ್ಥಾಪಕರ ಅಮೃತಶಿಲೆಯ ಅರ್ಧಪುತ್ತಳಿಗಳು, ಮಡಗಾಂವ್ ಗೋವೆಯ ಫಾದರ್, ರೋಜಾ ಶಿಕ್ಷಣ ಸಂಸ್ಥೆಗಾಗಿ ಕಡೆದ ಪಾದರ್ ರೋಜ್ ಅವರ ಅಮೃತಶಿಲೆಯ ಅರ್ಧಪುತ್ಥಳಿ. ಮೈಸೂರಿನ ಜಗನ್‌ಮೋಹನ ಪ್ಯಾಲೇಸ್ ಅರಮನೆಯ ಅಮೃತಶಿಲೆಯ ಮಾದರಿ, ಬೆಂಗಳೂರಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿನ ಪಂಪ, ರನ್ನ, ಅತ್ತಿಮಬ್ಬೆಯವರ ಉಬ್ಬುಶಿಲ್ಪಗಳು ಅವರ ಉತ್ಕೃಷ್ಟಕಲಾಪ್ರತಿಮೆಗಳಾಗಿವೆ. ಇಷ್ಟೇ ಅಲ್ಲದೆ ವೀರಮದಕರಿ ನಾಯಕನ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಮಾಡಿದ ಅಶ್ವಾರೂಢ ಮಾದರಿ. ಮೀರಜದ ಶಿವಾಜಿ ವಿದ್ಯಾಸಂಸ್ಥೆಗಾಗಿ ಮಾಡಿದ ಬಾಲ ಶಿವಾಜಿ

ಮತ್ತು ಜೀಜಾಮಾತಾರ ಐದು ಅಡಿ ಪ್ರತಿಮೆಗಳು, ಇಂಡಿಯಲ್ಲಿ ಸ್ಥಾಪಿಸಲಾದ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಬಗಲಿಯವರ ಪ್ರತಿಮೆ ಹಾಗೆ ಸಿಂದೆಯವರ ಪ್ರತಿಮೆಗಳು, ವಿಶ್ವಕನ್ನಡ ಸಮ್ಮೇಳನ ಜರುಗಿದಾಗ ಕೃಷ್ಣಶಿಲೆಯಲ್ಲಿ ಕೆತ್ತಿದ ಸ್ವರ್ಗದಿಂದ ಇಳಿಯುತ್ತಿರುವ ಅಪ್ಸರೆಯ ಶಿಲ್ಪಗಳು ಧನಂಜಯ ಶಿಲ್ಪಿಯವರ ಅಪ್ರತಿಮ ಕಲಾರಚನೆಗಳಾಗಿವೆ.

ಹಾಗೆ ಕಂಚಿನಲ್ಲಿ ಕೆತ್ತಿದ ಶ್ರೀ ಮಾದೇವಪ್ಪ ರಾಂಪುರೆಯವರ ಆರು ಅಡಿಯ ಪ್ರತಿಮೆ, ಗುಲಬರ್ಗಾ ತಾಜಸುಲ್ತಾನಪೂರ, ಮುಂಬೈನ ಗೌರಮೆಂಟ್ ಮೆಡಿಕಲ್ ಕಾಲೇಜು, ಮಹಾರಾಷ್ಟ್ರದ ಭೀಡ ತಾಲ್ಲೂಕಿನಲ್ಲಿ ಡಾ. ಬಾಬಾಸಾಹೇಬ ಅಂಬೇಡ್ಕರವರ ಪ್ರತಿಮೆಗಳು ಶಾಹಾಬಾದ ನೆಹರೂ ಗಾರ್ಡನ್‌ನಲ್ಲಿನ ನೆಹರು ಅವರ ಪುತ್ಥಳಿ, ಮೈಸೂರಿನ ರಾಗಿಮಂಡಿ ಚೌಡಯ್ಯನವರ ಪುತ್ಥಳಿಗಳು, ಲೋಹದ ಮೇಲೂ ಅವರಿಗಿದ್ದ ಹಿಡಿತವನ್ನು ಸಾಬೀತು ಮಾಡುತ್ತವೆ. ಹೀಗೆ ಕಲ್ಲು, ಲೋಹ, ಸಿಮೆಂಟು, ಪ್ಲಾಸ್ಟರ್ ಆಫ್ ಪ್ಯಾರಿಸ್‌ಗಳಲ್ಲಿ ಅವರು ತಯಾರಿಸಿದ ಪ್ರತಿಮೆ ಪುತ್ಥಳಿಗಳು ನಾಡಿನಾದ್ಯಂತ ತಲೆ ಎತ್ತಿ ನಿಂತಿರುವುದು ಕರ್ನಾಟಕದ ಕಲಾ ಶ್ರೀಮಂತಿಕೆಯ ದ್ಯೋತಕವಾಗಿದೆ. ಇವರ ಶಿಲ್ಪಾ ಕೃತಿಗಳು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಹೆಸರು ಗಳಿಸಿವೆ. ನೈರೋಬಿ, ಕೇನಿಯಾ ಮತ್ತು ಕುವೈತ್, ಜಪಾನ್‌ಗಳಂತಹ ಪ್ರಮುಖ ದೇಶಗಳ ವಸ್ತುಸಂಗ್ರಹಾಲಯಗಳಲ್ಲಿ ಧನಂಜಯಶಿಲ್ಪಿಯವರ ಶಿಲಾ ಕೆತ್ತನೆಗಳನ್ನು ಸಂಗ್ರಹಿಸಿ ಇಡಲಾಗಿದೆ.

## ಸೇವೆ ಸನ್ಮಾನಗಳು

ಧನಂಜಯ ಶಿಲ್ಪಿಯವರು ಬರೀ ಕಲ್ಲು ಕಂಚುಗಳಲ್ಲಿ ಉಳಿಯಿಟ್ಟುಕೊಂಡು ಕೂಡಲಿಲ್ಲ. ತಮ್ಮಲ್ಲಿರುವ ಕಲಾಶಕ್ತಿ ಸಂಪತ್ತನ್ನು ಕಲಾಪ್ರದರ್ಶನಗಳಲ್ಲಿನ ಕಲಾಕೃತಿಗಳ ಆಯ್ಕೆ, ನಿರ್ಣಯಗಳಿಗೆ ಮತ್ತು ಅಕಾಡೆಮಿ ನಡೆಸುವ ರಚನಾತ್ಮಕ ಕೆಲಸಗಳಿಗಾಗಿ ವಿನಿಯೋಗಿಸಿದರು. ಕರ್ನಾಟಕ ಲಲಿತಕಲಾ ಅಕಾಡೆಮಿ (1981-83), ಮೈಸೂರು ದಸರಾ ವಸ್ತುಪ್ರದರ್ಶನ(1981-83). ಇಂಥಲ್ಲಿ ಉತ್ಕೃಷ್ಟ ಕಲಾಕೃತಿಗಳ ಆಯ್ಕೆ ಮತ್ತು ನಿರ್ಣಯಗಳಲ್ಲಿ ತೋರಿದ ಮುತ್ಸದ್ಧಿತನ ಗಮನಾರ್ಹವಾದದ್ದು. ಇಷ್ಟೆ ಅಲ್ಲದೆ ಮುಂಬೈನ ಸ್ಟೇಟ್ ಆರ್ಟ್ಸ್, ರಾಜ್ಯ ಚಿತ್ರಕಲಾ ಶಿಕ್ಷಕರ ಕಲಾ ಪ್ರದರ್ಶನ ಹೀಗೆ ನಾಡಿನ ಒಳ ಹೊರಗೆ ನಡೆದ ಚಿತ್ರಕಲಾ ಪ್ರದರ್ಶನಗಳ ಪ್ರಮುಖ ರೂವಾರಿಗಳ ನಿರ್ಣಾಯಕರಾಗಿ ಉತ್ತಮ ಸೇವೆ ಸಲ್ಲಿಸಿದ್ದಾರೆ.

ಧನಂಜಯ ಶಿಲ್ಪಿಯವರು ಬದುಕಿದ್ದಕ್ಕೂ ಕಷ್ಟ ಕಾರ್ಪಣ್ಯಗಳೊಂದಿಗೆ ಹೋರಾಡುತ್ತಲೇ ಬಂದವರು. ಎಂಥ ಕಿರಿಕಿರಿಗಳ ಮಧ್ಯೆಯೂ ಹತಾಶರಾಗದೆ ಆತ್ಮ ಸ್ಥೈರ್ಯದಿಂದ ತಮ್ಮ ಕಲಾತ್ಮಕ ಬದುಕನ್ನು ರೂಪಿಸಿಕೊಂಡವರು. ಕಷ್ಟ ಬಂದಷ್ಟು ಕಲೆ ಅಭಿವೃದ್ಧಿಯಾಗುತ್ತದೆ. ಬದುಕು ಪಕ್ವವಾಗುತ್ತದೆನ್ನುವುದು ಅವರ ಬಲವಾದ ನಂಬಿಕೆ. ಸಂಸಾರಿಕ ಬದುಕನ್ನು ಹಾಗೂ ಕಲಾಬದುಕನ್ನು ಸಮಸಮವಾಗಿ ನಡೆಸಿಕೊಂಡು ಬಂದ ಅವರಿಗೆ ಇವೆರಡೂ ಭಿನ್ನ ಎಂದೆನಿಸಲೇ ಇಲ್ಲ. ಪರಸ್ಪರ ಹೊಕ್ಕು ಬಳಕೆಯಿಂದಾಗಿ ಅವರ ಕಲಾಭಿವ್ಯಕ್ತಿ ಹೆಚ್ಚು ವಾಸ್ತವ ಮತ್ತು ನೈಜತೆಯನ್ನು ಮೈಗೂಡಿಸಿಕೊಂಡಿತು. ಅವರ ಒಟ್ಟು ಶಿಲ್ಪಾಕೃತಿಗಳನ್ನು ಗಮನಿಸಿದರೆ ಕಲ್ಪನೆಗಿಂತ ವಸ್ತು ನಿಷ್ಠತೆಗೆ ಹೆಚ್ಚು ಜಾಗವಿರುವುದು ಕಂಡುಬರುತ್ತದೆ. ಇವರ ಕಲಾ ಸೇವೆಯನ್ನು ಗಮನಿಸಿ ನಾಡಿನ ಹಲವಾರು ಸಂಘಸಂಸ್ಥೆಗಳು ಸರಕಾರಿ ಇಲಾಖೆಗಳು ಇವರನ್ನು ಗೌರವಪೂರ್ವಕವಾಗಿ ಸನ್ಮಾನಿಸಿವೆ.

## ಪ್ರಶಸ್ತಿ ಪುರಸ್ಕಾರಗಳು

ಧನಂಜಯಶಿಲ್ಪಿಯವರಿಗೆ ಪ್ರಶಸ್ತಿ ಪುರಷ್ಕಾರಗಳು ಹೊಸವೇನಲ್ಲ. ವಿದ್ಯಾರ್ಥಿದೆಸೆಯಿಂದಲೂ ಒಂದಲ್ಲ ಒಂದು ರೀತಿಯಿಂದ ತಮ್ಮ ಪ್ರತಿಭಾಶಕ್ತಿಯಿಂದಾಗಿ ನಾಡಿನ ಒಳ-ಹೊರಗಿನವರಿಂದ ಪ್ರಶಸ್ತಿ ಪುರುಸ್ಕಾರಗಳನ್ನು ಪಡೆದುಕೊಂಡಿದ್ದಾರೆ. ಸಂಕೋಚ ಮತ್ತು ಅಂತರ್ಮುಖಿ ಸ್ವಭಾವದ ಶಿಲ್ಪಿಯವರು ಪ್ರಶಸ್ತಿಗಾಗಿ ಎಂದೂ ರಾಜಕೀಯ ಮಾಡಿದವರಲ್ಲ. ಪ್ರಶಸ್ತಿ ಪುರಸ್ಕಾರಗಳು ಶಿಲ್ಪಿಯವರಿಗೆ ಬಂದಿವೆ. ಇಂಥ ಪ್ರಶಸ್ತಿಗಳು ಶಿಲ್ಪಿಯ ಸ್ಪರ್ಷದಿಂದ ತಮ್ಮ ಉನ್ನತಿಯನ್ನು ದ್ವಿಗುಣಗೊಳಿಸಿಕೊಂಡಿವೆ ಎಂದರೆ ಅತಿಶಯೋಕ್ತಿಯಾಗಲಾರದು.

ಧನಂಜಯ ಶಿಲ್ಪಿಯವರು ವಿದ್ಯಾರ್ಥಿದೆಸೆಯಲ್ಲಿಯೇ (1961) ತಮ್ಮ ಮೌಲಿಕ ಕಲಾಕೃತಿಗಳ ಪ್ರದರ್ಶನಗಳಿಗಾಗಿ ಕಂಚಿನ ಪದಕ ಮತ್ತು ( 19962-63) ರಜತಪದಕ (1964) ಬಂಗಾರದ ಪದಕಗಳನ್ನು ಪ್ರಥಮ ಬಹುಮಾನಗಳನ್ನು ಪಡೆದುಕೊಂಡಿದ್ದಾರೆ. 1966-67ರಲ್ಲಿ ಶಿಲ್ಪ ಪ್ರದರ್ಶನಕ್ಕಾಗಿ ಅಂದಿನ ಗೌವರ್ನರ್ ಶ್ರೀ ಆಲಿಯಾವರಜಂಗ್ ಅವರಿಂದ ವಿಶೇಷ ಬಹುಮಾನ ಪಡೆದ ಕೀರ್ತಿ ಅವರದು. ಈ ಸಂದರ್ಭದಲ್ಲಿ ಪ್ರದರ್ಶನಗೊಂಡ ಶಿಲ್ಪಿಯವರ ಅತ್ಯುತ್ತಮ ರಚನೆಯಾದ ತಾಯಿ ಮಗುವಿನ ಶಿಲ್ಪಾಕೃತಿ

ಇವರಿಗೆ ವಿಶೇಷ ಹೆಸರು ತಂದುಕೊಟ್ಟಿತು. ಅಲ್ಲದೆ ಮುಂದೆ ಈ ಕಲಾಕೃತಿ ಜಾನ್ಸನ್ ಆ್ಯಂಡ್ ಜಾನ್ಸನ್ ಕಂಪನಿಯವರ ಜಾಹಿರಾತಿಗಾಗಿ ಸಿದ್ಧಪಡಿಸಿದ ಪಾಂಪ್ಲೇಟಿನ ಮುಖಪುಟದಲ್ಲಿ ಬಳಕೆಯಾಗಿ ದೇಶಾದ್ಯಂತ ಹೆಸರು ಮಾಡಿತು. ತಾಯಿ ಮಗುವಿನ ಸಹಜ, ಸುಂದರ, ಮುಗ್ಧ ಭಾವ ಲಹರಿಗಳನ್ನು ಪ್ರತ್ಯುತ್ಪಾದಿಸುವ ಈ ಮನೋಹರ ಶಿಲ್ಪ ಅವರ ಕಲಾ ಸಾಧನೆಯ ಮೇರು ಕೃತಿಯಾಗಿದೆ.

ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳು ಶಿಲ್ಪಿಯವರ ಕಲಾ ಮುಕುಟಕ್ಕೆ ಸಂದ ಗೌರವಗಳಾಗಿವೆ. ಇವೆಲ್ಲಕ್ಕೂ ಕಳಸ ಇಟ್ಟಂತೆ ಜೀವಮಾನದ ಕಲಾಸೇವೆಯನ್ನು ಗುರ್ತಿಸಿ ಕರ್ನಾಟಕ ಸರಕಾರವು ನೀಡುವ ಶಿಲ್ಪಕಲೆಯ ಸರ್ವಶ್ರೇಷ್ಠ ಪ್ರಶಸ್ತಿಯಾದ 2001ರ ಜಕಣಾಚಾರಿ ಪ್ರಶಸ್ತಿಯೂ ಇವರಿಗೆ ಲಭಿಸಿದೆ. ಧನಂಜಯ ಶಿಲ್ಪಿಯವರು ಎಂದೂ ಪ್ರಶಸ್ತಿ ಪುರಸ್ಕಾರಗಳನ್ನು ಬೆನ್ನು ಹತ್ತಿದವರಲ್ಲ, ಪ್ರಚಾರ ಪ್ರಿಯರೂ ಅಲ್ಲ. ಒಂದು ರೀತಿ ನಿರ್ಲಿಪ್ತ ಮನೋಭಾವ ಅವರದು. ನಿರಹಂಕಾರಿ, ನಿರಾಳ, ಸೌಜನ್ಯಶೀಲ ವ್ಯಕ್ತಿಯಾದ ಶಿಲ್ಪಿಯವರು ಪ್ರೀತಿವಾತ್ಸಲ್ಯ ಹೇಳಿ ಮಾಡಿಸಿದಂತಿದ್ದಾರೆ. ಮಾತು ನಡೆಗಳಲ್ಲಿನ ಅವರ ಸೌಜನ್ಯ ಮಾರ್ಗದರ್ಶಿಯಾದದ್ದು.

ಧನಂಜಯ ಶಿಲ್ಪಿಯವರ ಕಲಾಕೃತಿಗಳು ರಾಜ್ಯ, ರಾಷ್ಟ್ರ ಮಟ್ಟದಲ್ಲಿ ಪ್ರದರ್ಶನಗೊಂಡು ಅಪಾರ ಜನಮೆಚ್ಚುಗೆ ಗಳಿಸಿವೆ. ಹಾಗೆ ಪ್ರತಿಷ್ಠಿತ ಕಲಾಗ್ಯಾಲರಿಗಳಲ್ಲಿ ಸಂಗ್ರಹಯೋಗ್ಯ ಕೃತಿಗಾಗಿ ಸ್ಥಾನಪಡೆದಿವೆ. ಪ್ರತಿಷ್ಠಿತ ಜಾಹಿರಾತುಗಳಲ್ಲಿ ಸಿನಿಮಾ ಮಾಧ್ಯಮದಲ್ಲೂ ಕೂಡ ಇವರ ಕಲಾಕೃತಿಗಳನ್ನು ಸ್ಥಾನಪಡೆದಿವೆ. ಪ್ರತಿಷ್ಠಿತ ಜಾಹಿರಾತುಗಳಲ್ಲಿ ಸಿನಿಮಾ ಮಾಧ್ಯಮದಲ್ಲೂ ಕೂಡ ಇವರ ಕಲಾಕೃತಿಗಳನ್ನು ಬಳಸಿಕೊಳ್ಳಲಾಗಿದೆ. 1972ರಲ್ಲಿ ಖ್ಯಾತ ಚಿತ್ರನಟ ಮತ್ತು ನಿರ್ದೇಶಕ ಅಮೋಲ ಪಾಲೇಕರ್ ಅವರು ತಮ್ಮ ಚಿತ್ರವೊಂದರಲ್ಲಿ ಶಿಲ್ಪಿಯವರು ರಚಿಸಿದ ಅಮೃತಶಿಲೆಯ ಕಲಾಕೃತಿಗಳನ್ನು ಬಳಸಿಕೊಂಡದ್ದು ಇದಕ್ಕೆ ಉತ್ತಮ ನಿದರ್ಶನ. ಅಲ್ಲದೆ ರಾಷ್ಟ್ರೀಯ ಅಂತರಾಷ್ಟ್ರೀಯ ಮಟ್ಟದ ಕಲಾ ಪೋಷಕರು, ಸಾಂಸ್ಕೃತಿಕ ನಾಯಕರು, ರಾಜಕೀಯ ಮುಂದಾಳುಗಳು ಚಿತ್ರೋದ್ಯಮಿಗಳು ವಾಣಿಜ್ಯೋದ್ಯಮಿಗಳು ಶಿಲ್ಪಿಯವರ ಈ ಅನೇಕ ಕಲಾಕೃತಿಗಳನ್ನು ಮೆಚ್ಚಿ ಖರೀದಿಸಿರುವುದುಂಟು.

ಶಿಲ್ಪಿಯವರ ಬದುಕೇ ಬಹುಮುಖಿಯಾದದ್ದು. ಲೋಕಾನುಭವದಿಂದ ಮಿಳಿತಗೊಂಡಂಥದ್ದು. ಅವರ ಈ ಬಹುಮುಖಾನುಭವ ಅವರ ಕಲಾಕೃತಿಗಳ

ಜೀವಂತವಾಗಿ ಪುಟಿದೇಳುವ ಕಾರಣವೇ ಎಲ್ಲ ವಲಯದ ಮನುಷ್ಯರನ್ನು ತನ್ನತ್ತ ಸೆಳೆದುಕೊಳ್ಳುವಂತೆ ಮಾಡುತ್ತದೆ. ಆಕಾಶವಾಣಿ, ದೂರದರ್ಶನ, ಕಲಾ ಜಾಥಾಗಳಂತಹ ಪ್ರಚಾರಮಾಧ್ಯಮದಲ್ಲೂ ಶಿಲ್ಪಿಯವರ ಅಮೋಘ ಕೆತ್ತನೆಗಳು ಪ್ರಾತ್ಯಕ್ಷಿಕೆಗಳು, ಸಂದರ್ಶನಗಳು, ಅರ್ಥಪೂರ್ಣವಾಗಿ ಮೂಡಿಬಂದಿವೆ.

ಶಿಲ್ಪಕಲೆಗೆ ಅಂತಹ ಪ್ರೋತ್ಸಾಹವೇನೂ ಇರದ ಕಾಲದಲ್ಲಿ ರೂಪಗೊಂಡ ಧನಂಜಯಶಿಲ್ಪಿಯವರು ಸಂಕಲ್ಪ ಶಕ್ತಿಗೊಂದು ಮಾದರಿ. ಮೈಸೂರಿನ ಭಾಗದಲ್ಲಿ ಮೈಸೂರು ಒಡೆಯರ ಪ್ರೋತ್ಸಾಹ ಇಂತಹ ಲಲಿತಕಲೆಗಳಿಗೆ ಇರುತ್ತಿತ್ತು. ಆದರೆ ಉತ್ತರ ಕರ್ನಾಟಕದಲ್ಲಿ ಇಂಥ ಒಂದು ನೆರವು, ಸಾಧ್ಯವಿರಲಿಲ್ಲ.

ಮುಂಬೈಯಿಯಂತಹ ಕನ್ನಡೇತರ ನೆಲದಲ್ಲಿ ಕನ್ನಡದ ಕಂಪು ಸೂಸುವುದು ಸರಳವಾದ ಸಂಗತಿಯೇನಲ್ಲ. ಅಥಣಿಯಂತಹ ಹಿಂದುಳಿದ ಮತ್ತು ಗಡಿಭಾಗದ ಊರಲ್ಲಿ ಹುಟ್ಟಿದ ಧನಂಜಯ ಶಿಲ್ಪಿಯವರು ಎಂತಹ ಸಂಕಷ್ಟಕ್ಕೂ ಎದೆಗುಂದದೆ ಇಡೀ ತಮ್ಮ ಸಾಧಕ ಬದುಕನ್ನು ಮುಂಬೈ ಮತ್ತು ಹೈದ್ರಾಬಾದ್ ಕರ್ನಾಟಕದ ಭಾಗಗಳಲ್ಲಿಯೇ ರೂಪಿಸಿಕೊಂಡವರು. ಮತ್ತು ಸವೆಸಿದರು. ಅವರ ಸಾಧನೆಯ ಪಥದಲ್ಲಿ ಬಂದ ಮುಳ್ಳುಗಳನ್ನು, ಅಡಚಣೆಗಳನ್ನು ಪರಿಹರಿಸಿಕೊಂಡು ಮುನ್ನುಗ್ಗಿದ್ದ ಕಥೆಯನ್ನು ಅವರ ಬಾಯಿಂದ ಕೇಳಿದಾಗ ಮೈ ಜುಂ ಎನ್ನುತ್ತದೆ. ಇಂಥ ಒಬ್ಬ ಹಠವಾದಿಯ ಬದುಕು ಇಂದೂ ಕೂಡ ಕಷ್ಟ ಕೋಟಲೆಗಳಿಂದ ಮುಕ್ತವೇನಾಗಿಲ್ಲ. ಹುಟ್ಟಿದಾರಭ್ಯದಿಂದ ಹಿಡಿದು ಬದುಕಿನ ಸಂಜೆಗೆಂಪಲ್ಲಿರುವ ಧನಂಜಯಶಿಲ್ಪಿ ಯವರಿಗೆ ಈತನಕವು ಬಿಡದ ದೈಹಿಕ ನ್ಯೂನತೆಗಳು, ಆರೋಗ್ಯದ ಸಮಸ್ಯೆಗಳು ಕಾಡುತ್ತಲೇ ಇವೆ. ಅವರು ಇಂದಿಗೂ ಕ್ರಿಯಾಶೀಲವಾಗುಳಿಯಲು ಪ್ರಯತ್ನಿಸುತ್ತಿದ್ದರೂ ವಯಸ್ಸು ಮತ್ತು ಅನಾರೋಗ್ಯದ ಸಂಗತಿಗಳು ಅದನ್ನು ತಡೆಹಿಡಿಯುತ್ತಿವೆ. ಆರ್ಥಿಕವಾಗಿಯೂ ಅಂತಹ ಸದೃಢರೇನಾಗಿಲ್ಲ. ಆದರೆ ಮಕ್ಕಳು, ಮೊಮಕ್ಕಳು, ಸಂಬಂಧಿಗಳ ವಿಷಯದಲ್ಲಿ ತುಂಬಾ ಶ್ರೀಮಂತರು. ಬಹುದೊಡ್ಡ ಕೌಟುಂಬಿಕ ಪರಿವಾರ ಇವರದು. ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಗಟ್ಟಿಯಾಗಿ ನಿಲ್ಲಬಲ್ಲ ಎಲ್ಲ ಅರ್ಹತೆಯುಳ್ಳ ಶಿಲ್ಪಿಯವರು ಮತ್ತಷ್ಟು ವರ್ಷಗಳು ನಮ್ಮೊಂದಿಗಿರಲಿ ಎನ್ನುವುದೇ ಎಲ್ಲರ ಹಾರೈಕೆ. ಅನಾರೋಗ್ಯದಿಂದ ನರಳುತ್ತಿದ್ದ ಶಿಲ್ಪಿಯವರು ದಿನಾಂಕ 1.2.2004ರಂದು ನಿಧನರಾದರು.

## ಪೂರಕ ಸಾಹಿತ್ಯ

1. ಬಿ.ಪಿ. ಬಾಯಿರಿ, 1988, ರಂಜಾಳ ಗೋಪಾಲ ಶೆಣೈ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು
2. ಎಂ.ಎಚ್. ಕೃಷ್ಣಯ್ಯ, 1986, ರೂಪಶಿಲ್ಪ ಬಸವಯ್ಯ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು
3. ಎನ್. ಮರಿಶಾಮಾಚಾರ್, 2001, ದೃಶ್ಯಕಲಾ ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು
4. ಜಗನ್ನಾಥ ಎಸ್. ಜೆಕ್ಕೆಪಳ್ಳಿ, 1993, ಧನಂಜಯಶಿಲ್ಪಿ ಎಂ.ಎಫ್.ಎ. ಫೈನಲ್ ಇಯರ್ ಪ್ರೊಜೆಕ್ಟ್‌ವರ್ಕ್ (ಅಪ್ರಕಟಿತ)

# ಶಿಲ್ಪಕಲಾ ಅಕಾಡೆಮಿಯ ಪ್ರಕಟಣೆಗಳು

| ಪುಸ್ತಕ | ಬೆಲೆ |
|---|---|
| ಜಕಣಾಚಾರ್ಯ | ರೂ. ೪೦.೦೦ |
| ಶಿಲ್ಪ ಸಂಕುಲ | ರೂ. ೨೫.೦೦ |
| ಕಲಾರಾಧನೆ | ರೂ. ೨೫.೦೦ |
| ಹೊಯ್ಸಳ ಶಿಲ್ಪಕಲೆ (ಶಿಲ್ಪಸಂಪುಟ) | ರೂ. ೫೦.೦೦ |
| ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ | ರೂ. ೨೨೫.೦೦ |
| ಶಿಲ್ಪಬ್ರಹ್ಮ<br>ಸಿ. ಪರಮೇಶ್ವರಾಚಾರ್ಯ | ರೂ. ೧೫.೦೦ |
| ಉತುಂಗ ಕುಶಲಶಿಲ್ಪಿ<br>ದೇವಲಕುಂದ ವಾದಿರಾಜ್ | ರೂ. ೧೫.೦೦ |
| ಶಿಲ್ಪಿಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು | ರೂ. ೫೦.೦೦ |
| ಶಿಲ್ಪಸಿದ್ಧಾಂತಿ ಶ್ರೀ ಸಿದ್ಧಲಿಂಗ ಸ್ವಾಮಿಗಳು<br>ಶಿಲ್ಪ - ಚಿತ್ರಸಂಪುಟ | ರೂ. ೫೦.೦೦ |
| ಸಾತ್ವಿಕ ಶಿಲ್ಪಿ ನಾಗೇಂದ್ರ ಸ್ಥಪತಿ | ರೂ. ೧೫.೦೦ |
| ಶಿಲ್ಪಕಲಾ ಆರಾಧಕರು | ರೂ. ೨೦.೦೦ |
| ಭಾರತೀಯ ಶಿಲ್ಪಕಲೆ | ರೂ. ೫೦.೦೦ |
| ವರಶಿಲ್ಪಿ ಗುಂಡಪ್ಪ ಮಾಯಾಚಾರ್ಯ | ರೂ.೧೫.೦೦ |
| ಕೆ. ಶಾಮರಾಯ ಆಚಾರ್ಯ | ರೂ. ೧೫.೦೦ |
| ಎನ್. ಜಿ. ನೀಲಕಂಠಾಚಾರ್ | ರೂ. ೧೫.೦೦ |
| ರೂಪ ಲಕ್ಷಣ ಸಂಗ್ರಹ ಭಾಗ-೧ | ರೂ. ೨೦೦.೦೦ |
| ಕಲಾಚರಿತ್ರೆ ಭಾಗ - ೧ | ರೂ. ೧೦೦.೦೦ |
| ಶ್ರೀ ತಿಪ್ಪಾಜಪ್ಪನವರ ರೇಖಾಚಿತ್ರಗಳು | ರೂ. ೧೦೦.೦೦ |
| ಎನ್. ಪಿ. ಶ್ರೀನಿವಾಸಚಾರ್ | ರೂ. ೧೫.೦೦ |
| ಸಮಕಾಲೀನ ಸಂಪುಟ | ರೂ. ೫೦.೦೦ |